ಬೆಲೆ: ಎರಡು

# ಕರ್ಮವೀರ

ಸಂಪಾದಕರು:
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor
H. R. Purohit, M. A.

ಸಂಪುಟ ೧೯ ] ಹುಬ್ಬಳ್ಳಿ ಸೋಮವಾರ ತಾರೀಖು ೧೪—೪—೧೯೪೭ [ ಸಂಚಿಕೆ ೩

# ರಾಷ್ಟ್ರೀಯ ಸಪ್ತಾಹದ ಹೊಸ ಸಂಕೇತ

## ವಿಶ್ವ ಸ್ವಾತಂತ್ರ್ಯದ ಜ್ಯೋತಿಯ ಉದಯ

ಲೇ:— ಡಾ. ಪಟ್ಟಾಭಿ ಸೀತಾರಾಮಯ್ಯ

ಮುವ್ವತ್ತೇಳು ವರ್ಷಗಳ ಕೆಳಗೆ ರಾಷ್ಟ್ರೀಯ ಸಪ್ತಾಹವನ್ನು, ಸ್ತುತಿ ಪ್ರಾರ್ಥನೆಗಳ ಸಪ್ತಾಹವಾಗಿ, ಕಳೆದುಹೋದ ನೆನಹುಗಳ, ಸದ್ಯ ನಿರ್ಧಾರಗಳ ಮತ್ತು ಭಾವೀ ಯೋಜನೆಗಳ ಸಪ್ತಾಹವಾಗಿ ಮೊಟ್ಟಮೊದಲು ಸಂಘಟಿಸಲಾಯಿತು. ಈ ಕಲ್ಪನೆ ಮೊದಲು ಚಿಕ್ಕ ಮೊಳಕೆಯಾಗಿ ದೇಶದ ಹೃದಯದಲ್ಲಿ ಬೇರೂರಿತು. ಅದನ್ನು ಗಿಡವಾಗಿ ಸಾಕಿ ಡಾ. ಅನಿ ಬೆಸೆಂಟರು ಮೊದಲನೆ ಮಹಾಯುದ್ಧ ಕಾಲದಲ್ಲಿ ಸ್ವರಾಜ್ಯ ಚಳವಳಿಗೆ ಅದನ್ನು ಕೌಶಲದಿಂದಲೂ ಶಾಸ್ತ್ರೀಯವಾಗಿಯೂ ಕಸಿ ಮಾಡಿದರು. ಆಗ ಅದು ವರ್ಷವರ್ಷವೂ ಎಪ್ರಿಲ ತಿಂಗಳ ಮೊದಲನೆ ಮತ್ತು ಎರಡನೆ ವಾರಗಳಲ್ಲಿ ಆಚರಿಸಲ್ಪಡುತಿತ್ತು. ೧೯೧೯ ರಲ್ಲಿ ಗಾಂಧೀಜಿ ತಮ್ಮ ನೈಸರ್ಗಿಕ ಚಿಕಿತ್ಸೆಯ ಔಷಧಗಳೊಡನೆ ರಂಗದಲ್ಲಿ ಪ್ರವೇಶಿಸಿದರು; ೬ ನೆ ಎಪ್ರಿಲ ದಿನ ಉಪವಾಸದಿಂದ ಪ್ರಾರಂಭಿಸಿ ಒಂದು ವಾರ ಕಾಲ ಸತ್ಯಾಗ್ರಹದ ಗುಳಿಗೆಗಳನ್ನೂ ಸವಿನಯ ಶಾಸನ ಭಂಗದ ಕಷಾಯಗಳನ್ನೂ ಅದಕ್ಕೆ ಕೊಟ್ಟರು.

ಎಪ್ರಿಲ ೧೩, ೧೯೧೯ ರಂದು, ಮಾತೃಭೂಮಿಯ ಪದತಲದಲ್ಲಿ ಆತ್ಮಾರ್ಪಣೆ ಮಾಡುವ ಸಪ್ತಾಹದ ಕೊನೆಯ ದಿನ, ಜಾಲಿಯನವಾಲಾ ಬಾಗಿನ ಒಣಗಿದ ಭೂಮಿಯಲ್ಲಿ, ಭಾರತೀಯ ರಾಷ್ಟ್ರೀಯತೆಯ ಗಿಡವನ್ನು ಜನರಲ್ ಡಾಯರನೆಂಬ ಆ ಕೋಟಿಗಾರನು ೮೦೦ ಜನ ಹುತಾತ್ಮರ ಮತ್ತು ೩೦೦೦ ಜನ ವೀರರ ರಕ್ತದಿಂದ ತೋಯಿಸಿದನು. ಅಂದು ಮೊದಲ್ಗೊಂಡು, ಆ ಮಹಾದಿನದಲ್ಲಿ ಬಂಧುವಿಯೋಗ ಹೊಂದಿದ ಲಕ್ಷಾಂತರ ಸ್ತ್ರೀ ಪುರುಷ ಬಾಲಕರ ಕಣ್ಣೀರಿನ ಧಾರೆಯಿಂದ ತಂಪುವಡೆದ ಆ ಗಿಡ, ೧೯೨೧, ೧೯೩೦, ೧೯೩೨, ೧೯೩೪, ೧೯೪೧, ೧೯೪೨—೧೯೪೫ ರ ಬಿರುಗಾಳಿಗಳಿಂದ ಅಲುಗಿದರೂ ದಿನದಿನಕ್ಕೆ ಬೆಳೆಯುತ್ತಲೇ ಹೋಯಿತು. ಒಂದೊಂದು ಬಿರುಗಾಳಿಯೂ ಅದರ ಬೇರುಬೇರನ್ನು ನಡುಗಿಸಿದರೂ ನೆಲದ ತೇವವನ್ನು ಹೀರಿದರೂ ವರ್ಷದ ಫಲಗಳನ್ನು ಕೆಡಿಸಿದರೂ ಆ ವೃಕ್ಷ ಇನ್ನೂ ಆಳವಾಗಿ ಬೇರುಬಿಡುತ್ತ ಹೋಯಿತು. ಮುಂದಿನ ವರ್ಷಗಳಲ್ಲಿ ಅದು ಇನ್ನೂ ದಿವ್ಯವಾದ ಹಣ್ಣುಗಳನ್ನು ಬಿಟ್ಟಿತು. ಕೊನೆಗೆ ೧೯೪೭ ರಲ್ಲಿ ಸ್ವಾತಂತ್ರ್ಯದ ಫಲವನ್ನು ಹೊತ್ತು ಅದು ಭಾರತವನ್ನು ತನ್ನ ಸ್ವಂತ, ಬಂಧವಿಮೋಚನೆಯಿಂದ ಸಂತುಷ್ಟವಾಗದೆ ಪೌರ್ವಾತ್ಯದ ಇತರ ಬಂಧುರಾಷ್ಟ್ರಗಳಿಗೆ ಕೈಸನ್ನೆ ಮಾಡುವ "ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯ"ವಾಗಿ ಮಾಡಿತು.

### ಕುಶಂಕೆಗಳು

ನಿಸರ್ಗ ನಿಯಮಗಳು ನಿಗೂಢವೆಂದು ಹೇಳುತ್ತಾರೆ. ಆದರೆ ಮನುಷ್ಯನ ರೀತಿಯೂ ದುರೂಹ್ಯವೆಂದು ಹೇಳಬೇಕಾಗುವದು. ಇದು ವ್ಯಕ್ತಿಗಳಿಗೆಷ್ಟೋ ರಾಷ್ಟ್ರಗಳಿಗೂ ಅಷ್ಟೇ ಅನ್ವಯಿಸುತ್ತದೆ. ಮಸಾಹತು ಸ್ವರಾಜ್ಯದಿಂದ ಹೋಂರೂಲಿಗೆ ಹೋಂರೂಲಿನಿಂದ ಸ್ವರಾಜ್ಯಕ್ಕೆ ತನ್ನ ಸ್ವರಾಜ್ಯದಿಂದ ಪೂರ್ಣ ಸ್ವಾತಂತ್ರ್ಯಕ್ಕೆ ಬೇಡಿಕೆಯ ಸ್ವರವನ್ನು ಏರಿಸಿದ ಹಿಂದುಸ್ತಾನ ಸ್ವತಂತ್ರ ಜೀವನದ ವಿಚಾರಕ್ಕೆ ಒಂದು ಬಗೆಯ ಕುಶಂಕೆ, ಅಧೈರ್ಯಗಳಿಂದಲೇ ಸಿದ್ಧವಾಗುತಿದೆ. ಆ ಸ್ವತಂತ್ರ ಜೀವನ ಬಂಧನರಹಿತವಾದುದು ನಿಜ. ಆದರೆ ಒಂದು ಶತಮಾನದಿಂದ ಈ ರಾಷ್ಟ್ರದ ಜೀವನದ ಅಂಗಾಂಗಗಳಲ್ಲಿ ವ್ಯಾಪಿಸಿದ ಹೊರಗಿನ ಸಹಾಯ, ಭರವಸೆ, ಸಂರಕ್ಷಣೆ, ಆಶ್ವಾಸನಗಳಿಗೂ ಅದಿಂದು ಎರವಾಗಿದೆ. ವಿದೇಶಿ ಆಳರಸರ ಸಂಬಂಧವನ್ನು ಒಂದೇ ಏಟಿಗೆ ಹರಿದೊಗೆದಾಗ, ಪರಾಧೀನ ರಾಷ್ಟ್ರದ ತಲೆಯ ಮೇಲಿಂದ ವಿದೇಶಿ ಆಳಿಕೆಯ ಭಾರ ಇಳಿಸಲ್ಪಟ್ಟರೂ ಸಂಶಯ ಅಧೀರತೆಗಳ [illegible] ಇನ್ನೂ ಉಳಿದು ಸ್ವಾಬೀಸುಗಲ್ಲು [illegible]ಂದಿರದತ್ತ ಮುನ್ನಡೆಯಲು ತಂತ್ರ [illegible]ನೆ. "ನಾನು ಆತ್ಮರಕ್ಷಣೆ ಮಾಡಿ ಅಡ್ಡಿ ಮಾಡುತ್ತ[illegible]ಕೈಕೊಳ್ಳಬಲ್ಲೆನೆ? ನನ್ನನ್ನು ಸಂಘಟಿಸಿಕೊಳ್ಳುವಲ್ಲಿ ಯಶಸ್ವಿಯಾದೇನೇ? ನನ್ನನ್ನು ನಾನು ಆಳಿಕೊಳ್ಳಲು ಸಮರ್ಥನಾದೇನೆ?" ಈ ಸಮಸ್ಯೆಗಳು ಕಣ್ಣಿಗೆ ಮಂಜು ಕವಿಸಿ ವಿವೇಕವನ್ನು ವಿಚಲಿತಗೊಳಿಸುವವು.

### ಸಿಂಹಾವಲೋಕನ

ಆದರೂ ಚಂದ್ರಗುಪ್ತನ ಕಾಲದ ನಗರ ಸಭೆಗಳನ್ನು, ಅಫಗಾಣಿಸ್ತಾನದ (ಅದೊಂದು ಕಾಲದಲ್ಲಿ ಹಿಂದುಸ್ತಾನದ ಒಂದು ಪ್ರಾಂತವಾಗಿತ್ತು) ಜಿರಗಾಗಳನ್ನು, ವ್ಯಾಪಾರಿ, ಯಂತ್ರಜ್ಞರ ಕೂಟಗಳನ್ನು, ಕರ್ಮಕಾರರ, ಕಲಾವಿದರ ಸಂಘಗಳನ್ನು ಮತ್ತು ಹಳ್ಳಿಯ ಪಂಚಾಯತಿಗಳನ್ನು ನೆನೆದುಕೊಂಡರೆ ಪ್ರಾತಿನಿಧಿಕ ಸಂಸ್ಥೆಗಳೂ "ಸ್ವ-ರಾಜ್ಯ"ವೂ ನಮಗೆ ಪರಕೀಯವೆಂದು ಯಾರು ಹೇಳಬಲ್ಲರು? ನೀವು ಶಂಕಾಕುಲರಾದಾಗ ಕೌಟಿಲ್ಯನನ್ನು ನೆನೆಯಿರಿ. ಬುದ್ಧಿಬಲದಲ್ಲಿಯೂ ದೃಷ್ಟಿ ವೈಶಾಲ್ಯದಲ್ಲಿಯೂ ತನ್ನ ಇಟಾಲಿಯನ್ ಪ್ರತಿಸ್ಪರ್ಧಿಯಾದ ಮಚಿಯಾವಿಲಿಗಿಂತ ಎಷ್ಟೋ ಸಮರ್ಥನಾಗಿದ್ದ ಅವನು ರಾಜ್ಯ (ಸರಕಾರ) ವೆಂದರೆ ಧಾರ್ಮಿಕ ಸಂಸ್ಥೆಯಲ್ಲ ಆಧ್ಯಾತ್ಮಿಕ ಮೋಕ್ಷವೂ ಅದರ ಗುರಿಯಲ್ಲ ಕೇವಲ ಸಾಮಾಜಿಕ ಹಿತಸಾಧನೆಯೆ ಅದರ ಗುರಿಯೆಂದು ಸಾರಿದ್ದಾನೆ. ಶಾಸನವೂ ಧರ್ಮವೂ ಸೇರಿ ರಾಜ್ಯದ ಅಧಿಕಾರಬಲವನ್ನುಂಟುಮಾಡಿವೆಯೆಂದು ಅವನು ಹೇಳಿದ್ದಾನೆ- ವ್ಯಕ್ತಿಗಳ ರಾಜಕೀಯ ಸ್ಥಾನಮಾನಕ್ಕೂ ಅವರ ಧಾರ್ಮಿಕ ವಿಶ್ವಾಸಗಳಿಗೂ ಏನೂ ಸಂಬಂಧವಿಲ್ಲವೆಂದೂ ಅವನು ನಂಬಿದ್ದನು.

ಬುದ್ಧಧರ್ಮದ ಉಚ್ಚ್ರಾಯ ಕಾಲದಲ್ಲಿ ಅನೇಕ ಕುಲಗಳಲ್ಲಿ ಪ್ರಜಾರಾಜ್ಯ ಪದ್ಧತಿ ಬಳಕೆಯಲ್ಲಿತ್ತು. ಅಲೆಗ್ಝಾಂಡರನು ಹಿಂದುಸ್ತಾನವನ್ನು ಮುತ್ತಿದಾಗ ಪಂಜಾಬದಲ್ಲಿ ಪ್ರಜಾತಂತ್ರಾತ್ಮಕ ಸಂಸ್ಥೆಗಳು ಪ್ರಚಲಿತವಾಗಿದ್ದವು. ಒಮ್ಮೊಮ್ಮೆ ರಾಜ್ಯವನ್ನು ಹಿರಿಯರ ಸಮಿತಿಯ ಅಧ್ಯಕ್ಷನು ಆಳುತಿದ್ದನು. ಈ ಪ್ರಜಾರಾಜ್ಯಗಳನ್ನು ಕಿತ್ತುಹಾಕಿ ಬಳಕೆಗೆ ಬಂದ ರಾಜಸತ್ತೆಯಾದರೂ ನಿಯಂತ್ರಿತ ರಾಜಸತ್ತೆಯೇ ಇತ್ತು. ಶಾಸ್ತ್ರಗಳೂ ದೇಶರೂಢಿಗಳೂ ಸಮಾಜಕ್ಕೊಂದು ಬಗೆಯ ರಕ್ಷಕರಂತಿದ್ದ ಬ್ರಾಹ್ಮಣ ಪಂಡಿತರೂ ಮಂತ್ರಿಮಂಡಲವೂ ಅರಸನ ಅಧಿಕಾರವನ್ನು ನಿಯಮಿಸುತಿದ್ದವು. ವೇದಕಾಲದಲ್ಲಿ ರಾಜಪಟ್ಟ ಲೋಕನಿಯುಕ್ತವಾಗಿತ್ತು. ಒಮ್ಮೊಮ್ಮೆ ಅರಸನನ್ನು ಪದಚ್ಯುತಗೊಳಿಸಿದ, ಮರಣ ದಂಡನೆಗೆ ಗುರಿಪಡಿಸಿದ ಉದಾಹರಣೆಗಳೂ ಸಿಗುತ್ತವೆ. ರಾಜನು ಪ್ರಜಾಸೇವಕನೆಂಬುದು ಪ್ರಾಚೀನ ಭಾರತದ ರಾಜಕೀಯ ವಿಚಾರದ ಮೂಲ ತತ್ವಗಳಲ್ಲೊಂದಾಗಿತ್ತು.

ಶುಕ್ರನೀತಿ ಹೇಳುತ್ತದೆ:

"ಬ್ರಹ್ಮನು ರಾಜನನ್ನು ಪ್ರಜಾಸೇವೆಗಾಗಿ ಸೃಷ್ಟಿಸಿದನು. ಅದಕ್ಕಾಗಿ ಹುಟ್ಟುವಳಿಯಲ್ಲೊಂದು ಪಾಲು ಅವನಿಗೆ ಸಿಗುವದು, ಅವನು ರಾಜಾಂಕಿತವನ್ನು ಪಡೆಯುವದು [ಪ್ರಜಾ] ಪಾಲನೆಗಾಗಿ."

ಮತ್ತು

"ರಾಜನು ಗುಣವಿಹೀನನಾಗಿದ್ದರೆ, ನೀತಿಬಾಹಿರನಾಗಿದ್ದರೆ, ಕರ್ತವ್ಯಭ್ರಷ್ಟನಾಗಿದ್ದರೆ, ಅನ್ಯಾಯ ಜಾರಿಯಾಗಿದ್ದರೆ ಪ್ರಜೆಗಳು ಅವನನ್ನು ರಾಜ್ಯಘಾತಕನೆಂದು ಕಿತ್ತುಹಾಕತಕ್ಕದ್ದು."

ನಿರಂಕುಶ ರಾಜನ ಕಲ್ಪನೆ ಹಿಂದೂ ಬುದ್ಧಿಗೆ ಒಗ್ಗುತಿರಲಿಲ್ಲ. ರಾಜನು ಶಾಸನಾತೀತ ಅಥವಾ ಧರ್ಮಾತೀತನೆಂಬ ಭಾವನೆ ಹಿಂದುಸ್ತಾನದಲ್ಲಿ ಎಂದೂ ಇದ್ದಿಲ್ಲ. ಯಾವುದೇ ಕಾಲದಲ್ಲಿ ರಾಜನ ಅಧಿಕಾರ (ಸಿದ್ಧಾಂತದಲ್ಲಿಯಾದರೂ) ಸರ್ವತಂತ್ರಸ್ವತಂತ್ರವಾಗಿದ್ದಿಲ್ಲ. "ರಾಜ" ಶಬ್ದ "ರಞ" (ಅಂದರೆ ರಂಜಿಸು) ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಮಹಾಭಾರತ ಹೇಳುತ್ತದೆ. ಅವನ ಕರ್ತವ್ಯಗಳಲ್ಲಿ ಪ್ರಜೆಗಳನ್ನು ಸಂತೋಷಗೊಳಿಸುವದು, ಅವರನ್ನು ರಕ್ಷಿಸುವದು ಮತ್ತು ಸದಾ ಅವರ ಹಿತಕಾಮನೆ ಮಾಡುವದು ಬರುವದೆಂದು ಆ ಮಹಾಪುರಾಣದಲ್ಲಿ ಉಲ್ಲೇಖಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಎರಡು ಬಗೆಯ ಸಭೆಗಳಿದ್ದವು.—

ಒಂದು ಸಮಿತಿ, ಇನ್ನೊಂದು ಸಭೆ. ಜನನಿಯುಕ್ತ ಸಭೆಗಳು ಬೌದ್ಧಯುಗದ ಪ್ರಾರಂಭದಲ್ಲಿ ಸಾಮಾನ್ಯವಾಗಿದ್ದವು. ಬಹುಮತದ ಆಳಿಕೆಯೂ ಕೇಳಬರುತಿತ್ತು. ಮಂತ್ರಿ ಪರಿಷತ್ತು ರಾಜ್ಯದ ಮುಖ್ಯ ಆಡಳಿತ ಸಂಸ್ಥೆಯಾಗಿತ್ತು. ಅದಕ್ಕೆ ವಿಸ್ತಾರ ಅಧಿಕಾರಗಳೂ ಬೇಕಾದಷ್ಟು ಸ್ವಾತಂತ್ರ್ಯವೂ ಇತ್ತು. ಅಪೂರ್ವವಾಗಿ ಅರಸನನ್ನು ಆರಿಸುವ ಅಧಿಕಾರವೂ ಅದಕ್ಕಿತ್ತು. ಸಂಖ್ಯಾಮಾನದಿಂದ ಈ ವರ್ಗ ಬಹಳ ಚಿಕ್ಕದಿರಬಹುದಾದರೂ ಘನವಾದ ಬುದ್ಧಿವಿವೇಕದಿಂದಲೂ ನ್ಯಾಯನಿಷ್ಠೆಯಿಂದಲೂ ಅದು ತೇಜಸ್ವಿಯಾಗಿತ್ತು. ಎಂದು ಮೇಗಾಸ್ಥನೀಸನು ಹೇಳುತ್ತಾನೆ.

### ನ್ಯಾಯದಾನ

ಅಂದಿನ ನ್ಯಾಯದಾನ ಪದ್ಧತಿ ಇಂದು ಸುಸಂಸ್ಕೃತ ದೇಶಗಳಲ್ಲಿ ಪ್ರಚಲಿತವಾಗಿರುವ ಪದ್ಧತಿಯನ್ನು ಬಹಳವಾಗಿ ಹೋಲುತಿತ್ತು. ರಾಜನೂ ಮುಖ್ಯ ನ್ಯಾಯಾಧೀಶ (ಪ್ರಡ್ವಿವಾಕಃ)ನೂ ಇತರ ಮೂವರು ನಾಲ್ವರು ನ್ಯಾಯಾಧೀಶ (ಧಾರ್ಮಿಕಃ)ರೂ ಸೇರಿದ ವರಿಷ್ಠ ನ್ಯಾಯಸ್ಥಾನವಿರುತಿತ್ತು. ಆದರೆ ರಾಜನ ನ್ಯಾಯಸ್ಥಾನದ ಅಧ್ಯಕ್ಷತೆ ಪ್ರಡ್ವಿವಾಕನಿಗೆ ಸೇರಿದ್ದು ರಾಜನು ಉಪಸ್ಥಿತನಾಗಿದ್ದಾಗಲೂ ಇಲ್ಲದಿದ್ದಾಗಲೂ ಪ್ರಡ್ವಿವಾಕನಿಗೆ ಮೂಲ ಮತ್ತು ಪುನರ್ವಿಚಾರಣೆಯ ( Original & appallate ) ಅಧಿಕಾರಗಳೆರಡೂ ಇದ್ದವು

ರಾಜನ ನ್ಯಾಯಸ್ಥಾನದ ನಂತರ ಮಹತ್ವದ ಜಿಲ್ಹಾ ನ್ಯಾಯಸ್ಥಾನಗಳೂ ಅವುಗಳಿಗಿಂತ ಕೆಳಗೆ ಹಳ್ಳಿಯ ಪಂಚಾಯತ ನ್ಯಾಯಸ್ಥಾನವೂ ಇದ್ದವು. ಕೆಳ ನ್ಯಾಯಸ್ಥಾನದಿಂದ ಮೇಲಿನದಕ್ಕೆ ಅಪೀಲು ಮಾಡುವ ವ್ಯವಸ್ಥೆಯೂ ಸರಿಯಾಗಿತ್ತು. ವಿಚಾರಣೆಗಳು ಯಾವಾಗಲೂ ಬಹಿರಂಗವಾಗಿಯೆ ಜರುಗುತಿದ್ದವು. ಶುಕ್ರನೀತಿ ಹೇಳುತ್ತದೆ: "ರಾಜನಾಗಲಿ, ನ್ಯಾಯಸಮಿತಿಯಾಗಲಿ ಎಂದಿಗೂ ಗೋಪ್ಯವಾಗಿ ವಿಚಾರಣೆ ನಡೆಸಕೂಡದು." ಹಿಂದಿನ ವಾಙ್ಮಯದಲ್ಲಿ ಕಂಡುಬರುವ ಉಲ್ಲೇಖಗಳನ್ನೂ ವಿದೇಶೀ ಯಾತ್ರಿಕರು ಬಿಟ್ಟು ಹೋದ ವರದಿಗಳನ್ನೂ ನೋಡಿದರೆ ಪ್ರಾಚೀನ ಹಿಂದುಸ್ತಾನದಲ್ಲಿ ಒಳ್ಳೆ ಕಾರ್ಯಕ್ಷಮವಾದ ನ್ಯಾಯದಾನ ಪದ್ಧತಿಯಿತ್ತೆಂಬ ಮಾತು ಸ್ಪಷ್ಟವಾಗುವದು. ಅದಕ್ಕೆ ಮೂರು ಕಾರಣಗಳಿದ್ದಿರಬಹುದು—ನ್ಯಾಯಾಧೀಶರ ನ್ಯಾಯನಿಷ್ಠೆ, ರಾಜಪುರುಷರ (ಪೋಲೀಸ) ಕ್ಷಮತೆ, ಮತ್ತು ಜನರಲ್ಲಿದ್ದ ಪ್ರಾಮಾಣಿಕತೆ. ವಿಷ್ಣು ಎಂಬವನು ದಿಗ್ವಿಜಯಿಗಳಿಗೆ ಈ ಕೆಳಗಿನ ಉಪದೇಶ ಕೊಟ್ಟಿದ್ದಾನೆ: "ಶತ್ರುವಿನ ರಾಜ್ಯವನ್ನು ಗೆದ್ದು ವಿಜಯಿಯಾದವನು ಆ ದೇಶದ ಶಾಸನವನ್ನು ಉಪೇಕ್ಷಿಸದಿರಲಿ. ರಾಜಧಾನಿಯನ್ನು ಆಕ್ರಮಿಸಿದ ಮೇಲೆ ವಿಜಯಿ ಆ ದೇಶದ ರಾಜಕುಲದಿಂದೊಬ್ಬನನ್ನು ಅರಸನಾಗಿ ನೇಮಿಸಿ ಅವನಿಗೆ ರಾಜಯೋಗ್ಯ ಗೌರವವನ್ನು ಕೊಡಬೇಕು. ರಾಜಕುಲವನ್ನು ಅವನು ಅಳಿಸದಿರಲಿ." ಚಾಣಕ್ಯನ ಹೇಳಿಕೆ ಇದು: "ರಾಜನು ತಾನು ಗೆದ್ದುಕೊಂಡ ರಾಜ್ಯದ ಜನರ ನಡೆನುಡಿ, ರೂಢಿ ಆಚಾರಗಳನ್ನು ಅನುಸರಿಸಬೇಕು. ಅವರ ರಾಷ್ಟ್ರೀಯ, ಧಾರ್ಮಿಕ ಮತ್ತು ಸಾಮಾಜಿಕ ಉತ್ಸವಗಳಿಗೆ ಮನ್ನಣೆ ಕೊಡಬೇಕು."

### ಭವಿಷ್ಯತ್ತು

ಶತಶತಮಾನಗಳ ದಾಸ್ಯದ ನಂತರ ಭರತಮಾತೆ ಇಮ್ಮಡಿ ಮಹಿಮೆ ತೇಜಸ್ಸುಗಳೊಡನೆ ಪುನರ್ಜನ್ಮ ಹೊಂದುತಿದ್ದಾಳೆ. ಮೊನ್ನೆ ಜನೆವರಿ ೨೬ (೧೯೪೭) ನೆ ದಿನ ಹಿಂದುಸ್ತಾನ ಸ್ವಾತಂತ್ರ್ಯ ದಿನವನ್ನಾಚರಿಸಿದಾಗ, ಸಾರ್ವಭೌಮ ಸ್ವತಂತ್ರ ಪ್ರಜಾರಾಜ್ಯವೆಂಬುವು ಅದರ ಹೃದಯದ ಆತುರದ ಆಕಾಂಕ್ಷೆ, ಮನಸಿನ ಸಾತ್ವಿಕ ನಿರ್ಧಾರ, ನಾಲಿಗೆಯ ಪ್ರಾರ್ಥನಾಪೂರ್ಣ ಬೇಡಿಕೆ ಮಾತ್ರವಾಗಿತ್ತು. ಆದಾಗಿ ಒಂದು ತಿಂಗಳು ಕೂಡ ಕಳೆದಿದ್ದಿಲ್ಲ, ಅಷ್ಟರಲ್ಲೆ ಹಲಗಾಲದಿಂದ ದುಷ್ಟ ಸಂದಿಗ್ಧತೆ, ಪೈಶಾಚಿಕ ಅರ್ಥಾಂತರಗಳಿಂದೊಡಗೂಡಿದ ಹೇಳಿಕೆಗಳನ್ನು ಹೊರಡಿಸುವ ರೂಢಿಯನ್ನಿಟ್ಟುಕೊಂಡಿದ್ದ ಬಲಾಢ್ಯ ಬ್ರಿಟಿಶ ಸರಕಾರ ತನ್ನ ಪಲ್ಲವಿಯನ್ನು ಬದಲಿಸಿ, ಸ್ಫುಟ ಭಾಷೆಯಲ್ಲಿ ೧೯೪೮ ಜೂನ ತಿಂಗಳಲ್ಲಿ ಬ್ರಿಟಿಶ ಸಾಮ್ರಾಜ್ಯ ಹಿಂದುಸ್ತಾನವನ್ನು ಬಿಟ್ಟು ಹೋಗುವದೆಂದು ಸಾರಿತು. "ಚಲೇಜಾವ್" ಎಂಬುದು ಬರಿ ಬೀಜ ಮಂತ್ರ ಅಥವಾ ಘೋಷಣೆಯಾಗಿ ಇಲ್ಲವೇ ಭಾವೀ ಯುದ್ಧದ ಜಯಕಾರವಾಗಿ ಉಳಿಯದೆ ವಾಸ್ತವಿಕ ರಾಜಕಾರಣ ಸೂತ್ರವಾಯಿತು. ಹಿಂದುಸ್ತಾನದ ಸ್ವಾತಂತ್ರ್ಯದ್ವಾರವನ್ನು ತೆರೆಯುವ ಬೀಗದ ಕೈಯಾಯಿತು. ಹಿಂದೀ ಸ್ವಾತಂತ್ರ್ಯದ ಕೀಲಿಕೈಯೇ ಅದಕ್ಕಿಂತಲೂ ವಿಶಾಲತರವಾದ ವಿಮೋಚನೆಯ ಕೀಲಿಕೈಯೂ ಆಗಿದೆಯೆಂಬುದು ಬೇಗನೆ ಸಿದ್ಧವಾಯಿತು. ಚತುರ್ದಿಕ್ಕುಗಳಿಂದಲೂ ದಿಲ್ಲಿಯಲ್ಲಿ ಸೇರಿದ ಏಶಿಯಾದ ಪ್ರತಿನಿಧಿಗಳು, ವಿಶ್ವಕ್ಕೆ ಸ್ವಾತಂತ್ರ್ಯ, ಭೂಮಿಯಲ್ಲಿರುವ ಪ್ರತಿಯೊಬ್ಬನಿಗೆ ಸ್ವಾತಂತ್ರ್ಯ, ದೇಹ ಬುದ್ಧಿ ಆತ್ಮಗಳಿಗೆ ಸ್ವಾತಂತ್ರ್ಯ, ವ್ಯಕ್ತಿ ಹಾಗು ಗುಂಪಿಗೆ ಸ್ವಾತಂತ್ರ್ಯ, ಮಾನವನಿಗೂ ದೇಶಕ್ಕೂ ಸ್ವಾತಂತ್ರ್ಯ, ವಾಕ್‌ಸಂಘಸ್ವಾತಂತ್ರ್ಯ ದಾರಿದ್ರ್ಯ ಭಯಗಳಿಂದ ವಿಮೋಚನೆ, ಎಂಬ ಉದಾತ್ತ ಸಂದೇಶವನ್ನು ಕೇಳಿದರು, ಉಪಕೃತ ಜಗತ್ತಿಗೆ ಬೀರಿದರು.

ಅದು ಕಾರಣ, ಈ ವರ್ಷದ ರಾಷ್ಟ್ರೀಯ ಸಪ್ತಾಹವೆಂಬುದು ಬರಿ ಉತ್ಕಂಠೆಯ ಪ್ರಯೋಗವಲ್ಲ, ಜೂಜುಗಾರಿಕೆಯ ಸಾಹಸವಲ್ಲ, ರೂಢಿ ಸಂಪ್ರದಾಯವೂ ಅಲ್ಲ, ಸೋಮಾರಿಯ ಸಮಾರಂಭವೂ ಅಲ್ಲ, ಅದು ಈಗಾಗಲೆ ದೊರಕಿಸಿಕೊಂಡ ಲಾಭದ ಲೆಕ್ಕವೆಣಿಸುವ, ಮುಂದಿನ ಯೋಜನೆಗಳ ಸನ್ನಾಹ ಮಾಡುವ ಸಂಧಿ; ಹಿಂದಿನದರ ಸಿಂಹಾವಲೋಕನ, ಇಂದಿನದರ ಅವಲೋಕನ, ಮುಂದಿನದರ ಆಲೋಕನ ಇವೆಲ್ಲವನ್ನು ಒಂದಾಗಿ ಎರಕ ಹೊಯ್ಯುವ ಅವಸರ; ಅಸೀಮದ ಯಾತ್ರೆಯಲ್ಲಿ ಎಷ್ಟೋ ಜಾರಿ ದಾರಿತಪ್ಪಿ, ಗುಡ್ಡ ಕಾಡುಗಳಲ್ಲಿ ಕತ್ತಲೆ ಮಸುಕಿನಲ್ಲಿ ಅಲೆದು ಠಕ್ಕರ ಠೌಳಿಗಾರರ ಕೈಗೆ ಸಿಕ್ಕಿ ಪೇಚಾಡಿದರೂ ಕೊನೆಗೆ ಸರಿದಾರಿಯನ್ನು ಕಂಡು ಹಿಡಿದು ಹಾಲ್ಜೇನು ಸುರಿಸುವ ನಾಡಿನತ್ತ ಹೆಜ್ಜೆಯೆತ್ತಿದ ಈ ಪ್ರಾಚೀನ ಭೂಮಿಯ ವಿವಿಧ ಅನುಭವಗಳ ಚಿತ್ರವಿಚಿತ್ರಮಯ ಭವಿತವ್ಯಕ್ಕೆ ಕನ್ನಡಿ ಹಿಡಿವ ಸಂದರ್ಭ. ಸುಖ ಕಷ್ಟಗಳ ನಡುವೆ, ದಶಕದಶಕಗಳಲ್ಲಿಯೂ ಹೊಸ ಹೊಸ ಮಾಯಾ ರೂಪತಳೆದ "ಅಂತರಿಕ" ಸಂಶಯಗಳ, "ಬಾಹ್ಯ"ಶತ್ರುಗಳ ಕಾರಸ್ಥಾನಗಳನ್ನು ಗೆದ್ದು ಹಿಂದೀಯರು ನೂರೈವತ್ತು ವರ್ಷಗಳ ಯಾತ್ರೆಯನ್ನು ಮುಗಿಸಿದ್ದಾರೆ. ಇಂದು ಭಾರತ ವಿಮೋಚನೆಯ ನೂತನ ಅವತಾರವಾಗಿದೆ—ದೂರದೂರದ ಚೀನ, ಇಂಡೋನೇಶಿಯಾ, ವ್ಹೆಟ್ನಾಮು, ಸಿಯಾಮು, ಸಿಂಗಾಪುರ, ಬ್ರಹ್ಮ, ಸಿಂಹಳಗಳಿಂದ ಪೂರ್ವ ದೇಶದ ಋಷಿಮುನಿಗಳು ಪುಣ್ಯಾಹವಾಚನೆ ಮಾಡಬಂದಿದ್ದಾರೆ. ಇಂದು ಭಾರತ ವರ್ಷ ಎಲ್ಲರ ಕಣ್ಣುಗಳಿಗೂ ಚಿರಂತನ ಜ್ಯೋತಿಯಾಗಿದೆ, ಸ್ವಾತಂತ್ರ್ಯದ ಸಾರಥಿಯಾಗಿದೆ, ವಿಮೋಚನೆಯ ಸಂಕೇತವಾಗಿದೆ.

# ಮಾಘ ಮಾಸದ ಕತೆಗಳು

( ಕಲಾಮಂಟಪ ಬೆಳಗಾವಿ )

ಕಳೆದ ಮಾಸದಲ್ಲಿ ನಮ್ಮ ಕನ್ನಡ ಸಾರಸ್ವತ ಪ್ರಪಂಚದಲ್ಲಿ ಒಟ್ಟು ೪೮ ಕತೆಗಳು ಬಂದಿವೆ. ಅವು

೧. ಅನುವಾದ ... ... ೫
೨. ಪ್ರೇಮಕಾಮ ... ೧೦
೩. ಧ್ಯೇಯವಾದಿ ... ೧೫
೪. ಉಳಿದವು ... ... ೯
೫. ರೂಪಕ ... ...... ೩
೬. ಒಳ್ಳೆಯವು... ... ೬
—
೪೮

ಅನುವಾದಗಳಲ್ಲಿಯ ಮಗು ಮತ್ತು ಇರುವೆಯ ಸಾಲು ಕಥಾಶ್ರೇಷ್ಠ ಮೊಪಾಸಾಂತನವು. ಒಂದನ್ನು ಅಶ್ವತ್ಥ ಎಸ್. ರಾವರು ಜಯಂತಿಯಲ್ಲಿಯೂ ಇನ್ನೊಂದನ್ನು ಟಿ. ಸುನಂದಮ್ಮರು ಕತೆಗಾರದಲ್ಲಿಯೂ ಬರೆದಿರುವರು. ಎಂ. ಎಸ್. ಗುಂಡೂರಾಯರು ಕಂಬನಿ ಎಂಬ ಹಿಂದಿ ಕತೆಯನ್ನು ಕತೆಗಾರನಲ್ಲಿ ಎನ್. ಪ್ರಹ್ಲಾದರಾಯರು ಹಾವು ಕತೆಯನ್ನು ಸುಬೋಧದಲ್ಲಿ, ಪ್ರೇಮಾ ಅಯ್ಯಂಗಾರರು ನಂದುವಿನ ತಮ್ಮ ಕತೆಯನ್ನು ಜಯಕರ್ನಾಟಕದಲ್ಲಿ ಅನುವಾದಿಸಿರುವರು. ಅನುವಾದ ಕತೆಗಳು ನಾವೀನ್ಯಪೂರ್ಣವಾಗಿ, ಮಾನವನ ಸೂಕ್ಷ್ಮ ಹೃದಯದ ಭಾವಭಂಗಿಯ ಉತ್ಕಟತೆಯನ್ನು ಪಡಿನೆಳ ಬಿಡುವವು.

ಪ್ರೇಮ ಕಾಮದ ಹತ್ತು ಕತೆಗಳನ್ನು ಒಂದೇ ಎಳೆಯಲ್ಲಿ ಸುಲಭವಾಗಿ ಪೋಣಿಸಿಬಿಡಬಹುದು. ರಾಮಚಂದ್ರ ಗದಗರ ನಿರಾಶೆ ಪ್ರೇಮ, ವಿಶ್ರಾಮ ಉಡುಪಿಯವರ ತಂಗಿ ಕತೆಗಳು ಭಗ್ನಪ್ರೇಮದಿಂದ ಸಾಗಿ ಅಣ್ಣ-ತಂಗಿಯಾಗಿ ಮೂರ್ತಟ್ಟಿರುವವು. ಈಶ್ವರಚಂದ್ರ ಚಿಂತಾಮಣಿಯವರ ಜನಜ್ವಾಲೆ, ಎಂ. ಕೆ. ಭಾರತಿ ರಮಣಾಚಾರ್ಯರ ಸ್ತ್ರೀಹೃದಯ ಪ್ರೇಮಭಂಗದಿಂದ ವ್ಯಭಿಚಾರಕ್ಕಿಳಿದಿರುವವು. ಎ. ಎನ್. ಕೃಷ್ಣಪ್ಪರ ಅವಳಿಗೆ ಅವಳೇ ಗತಿ ಮತ್ತು, ಮ. ದ. ಸಜ್ಜನರ ಮಾಲತೀ ಮಧುಕರಗಳಲ್ಲಿ ಅದೇ ವಸ್ತು ಬೆಳೆದು ಒಬ್ಬಳು ಆತ್ಮಹತ್ಯೆ ಮಾಡಿಕೊಂಡರೆ ಇನ್ನೊಬ್ಬಳು ದೇಶ ಸೇವಿಕೆಯಾಗುವಳು. ವಿ. ಸಿ. ಹಿತ್ತಲಮನೆಯವರ ಎದೆಯೊಲವು, ಕೆ. ಶ್ರೀಕಂಠರ ನಿಜಕ್ಕು ಮತ್ತು ಜಗದೀಶರ ಒಡೆದ ಬಾಳುವೆ ಇಂಥವೇ ಸನ್ನಿವೇಶವನ್ನೊಳಗೊಂಡಿವೆ. ಮೊದಲನೆಯದರ ಭಗ್ನಪ್ರೇಮ ವಿಲಸಗೊಂಡಿದೆ. ಎರಡನೆಯದು ಸಂಶಯ ನಿವಾರಣೆಗೊಂಡು ಕೂಡಿದೆ. ಮೂರನೆಯದು ಬಲುಮೆಗೆ ಒಳಗಾಗಿದೆ. ಜನಜ್ವಾಲೆ ಕತೆಯು ಹೇಮಂತರ ಭಗ್ನ ಮಂದಿರ ಕಾದಂಬರಿಯನ್ನು ಕತೆಯಾಗಿ ಘಟ್ಟಿಗೊಳಿಸಿಕೊಂಡಿದೆ ಎಂದರೆ ಅತಿಶಯೋಕ್ತಿ ಎನಿಸಲಾರದು. ಆದರೆ ಕೆ. ಶ್ರೀಕಂಠರ ಪಾಸಾದಳೇನೋ ಸರಿ ಆದರೆ...... (ಸ್ವತಂತ್ರ) ಓದಿ ರೋಷಗೊಳ್ಳಬೇಕು. ಕತೆಯು—ಲಲಿತಾ ಸಾಯನ್ಸ ವರ್ಗದ ವಿದ್ಯಾರ್ಥಿನಿ. ಮೊದಲಿನ ಮೂರು ವರುಷವೂ ಮೇಲ್ ತರಗತಿಯಲ್ಲಿ ಉತ್ತೀರ್ಣಳಾದವಳು. ಕೊನೆಯ ಪರೀಕ್ಷೆಯ ಕಾಗದವನ್ನು ಹಾಗೆ ಬರೆಯದೆ ಕೊಡುವಳು. ಮನೆಯವರು ಮಗಳಸಂಬಂಧವಾಗಿ ಕಟ್ಟಿದ ಉನ್ನತಗೋಪುರವು ನಿರಾಶೆಯಲ್ಲಿ ಪರಿಣಮಿಸುವ ಸಂಭವ. ಲಲಿತೆ ತಳಮಳಿಸುವಳು. ಒಬ್ಬ ಗೆಳತಿಯ ಸಹಾಯದಿಂದ ತನ್ನ ಕಾಲೇಜದ ಪ್ರಾ. ಅಂಜನೇಯರನ್ನು ತೃಪ್ತಿಪಡಿಸಿ ಪುನಃ ಮೊದಲನೆಯ ನಂಬರು ಪಡೆಯುವಳು. ಕೊನೆಗೆ ಪಾಸಾದಳೇನೋ ಸರಿ. ಆದರೆ ... ... ! ನೂರೆಂಟು ಗುಪ್ತ ರೋಗದ ತವರುಮನೆಯಾಗಿ ತಾಯಿಯ ಮನೆಗೆ ಬರುವಳು. ತಂದೆಯವರು ಕಟ್ಟಿದ ಗೌರವ ಪೂರ್ಣ ಉನ್ನತ ಗೋಪುರವು ಹುಳು ಹತ್ತಿ ಖಿಲಖಿಲವಾಗಿ ನಿಲ್ಲುವದು; ನಮ್ಮ ಸಾಲೆ ಕಾಲೇಜುಗಳಲ್ಲಿ ಕಲಿತ, ಸುಸಂಸ್ಕೃತ ಪ್ರಾಧ್ಯಾಪಕರು ವಿದ್ಯಾದಾನದ ನೆವದಿಂದ ಗುಪ್ತರೋಗ ದಾನದ ಅಶ್ಲೀಲಗಾಮಿಗಳಿದ್ದರೆ ಸಜ್ಜನರಾದ ಪಾಲಕರು ತಮ್ಮ ಮಕ್ಕಳನ್ನು ಕಲಿಯಲು ಕಳಿಸಬೇಕೆಂತು? ಇಲ್ಲಿ ಲಲಿತೆಗಿಂತ ಡಾ! ಅಂಜನೇಯರು ದೊಡ್ಡ ಅಪರಾಧಿಗಳು. ಇಂಥ ಕುಟಿಲಪಟ ವ್ಯಕ್ತಿ ಎಲ್ಲಿಯಾದರೂ ವಿದ್ಯಾದಾನದ ಮುಸುಕಿನಲ್ಲಿ ನಡೆಯುತ್ತಿರಬೇಕು. ಸಮಾಜವು ಕಂಡರಿಯದು. ಲೇಖಕರು ದಿಟ್ಟ ಮನಸಿನಿಂದ ಈ ಸಂಗತಿಯನ್ನು ಹೊರಗೆಡಹಿದುದು ಧೈರ್ಯವೇ ಸರಿ.

ಧ್ಯೇಯವಾದಿ ಕತೆಗಳಲ್ಲಿ ಎನ್. ರಘುನಾಥ ಶೆಟ್ಟಿಯವರ ಸಿಗಲೇಬೇಕು, ಹೊಯಿಸಳರ ಗುಂಡು, ಕೈತಂಜೆ ಗೋವಿಂದಭಟ್ಟರ ಮಹಿಯ ಮರ್ಯಾದೆ ಒದಲರ್ಹವಾದವುಗಳು. ಕೃಷ್ಣಮೂರ್ತಿ ಪುರಾಣಿಕರ ರಾಜಾ ಕತೆಯು, ರಾಘವೇಂದ್ರ ನಾಗಲರ ಖಂಡ್ಯಾ (ಸಂಜಯ. ೬-೧೦-೪೬) ಕತೆಗೆ ಹದಿನೈದಾಣೆ ಹೋಲುವದು. ಎರಡೂ ಕತೆಗಳಿಗೆ ನಾಯಿಯೇ ಸೂತ್ರಧಾರ. ಯಜಮಾನರ ಆತ್ಮೀಯತೆ, ಒಂದಿನ ಸಾವು. ಒಂದರದಲ್ಲಿ ಖಂಡ್ಯಾನ ಸಲುವಾಗಿ ಗೌಡರು ಮರುಗಿದರೆ ಇನ್ನೊಂದರಲ್ಲಿ ರಾಜಾನ ಸಲುವಾಗಿ ಡಾಕ್ಟರರು ವಿರಹವ್ಯಥೆಯನ್ನು ಪಡುವರು. ಇಷ್ಟೇ!

ಉಳಿದ ಎಂ. ಎಸ್. ರಾಮರಾವರ ಪರಸ್ಪರರ ಮೆಚ್ಚು ಸಂಘ, ರಾ. ಸತ್ಯನಾರಾಯಣರಾಯರ ಚಂದ್ರಶೇಖರನೆಂಬ ದಿನದು ಬಂದದ್ದು ಮತ್ತು ಕುಮಾರ ಶ್ರೀಯವರ ಕೈಲಾಸ ಮೋತಿಗಳು ರೂಪಕ ಜಾತಿಯ ಉತ್ತಮ ಕತೆಗಳು.

## ಮಾಘ ಪಟ್ಟಿ

ದಲಕೆಯವರ ಇರಾಣಿ ಬಾವುಗ (ಕರ್ಮವೀರ) ಎಂ. ಕೆ. ಜಯಲಕ್ಷ್ಮಿಯವರ ಮರೆಯಲ್ಲಿದ್ದ ಮಡದಿ (ವಾಣಿ) ಸೌ. ಶಾಂತಾ ಬೆಳಗಲರ ಅದಲು ಬದಲು (ಕರ್ಮವೀರ) ಎಂ. ಎಚ್. ವೀರಭದ್ರಯ್ಯರ ಅಹ್ವಾನ ಪತ್ರಿಕೆ ಮತ್ತು ಶ್ರೀಶರ ಫೋಟೋ ಗ್ರಾಫರ (ಕಥಾವಳಿ) ಉತ್ತಮವಾದ ಕತೆಗಳು.

ಅದಲು ಬದಲು ಕತೆಯು ಚಿಕ್ಕದಾದರೂ ಸಣ್ಣ ಮಾಟದಲ್ಲಿ ಹೆಂಡತಿಯು ಅವನ ರಸಪ್ರಿಯತೆಗೆ ಹೇಗೆ ಹೇಗೆ ಸೋಗು ಹಾಕಬೇಕಾಗುವದೆಂದು ಸುಂದರವಾಗಿ ಬರೆದಿರುವರು. ಕತೆಯು ತನ್ನ ಚಿಕ್ಕಬಾಯಿಂದಲೇ ಮಾನವನ ಮನೋವಿಶ್ಲೇಷಣ ಧರ್ಮವನ್ನು ಒಂದು ದಿವ್ಯ ಸಂದೇಶ ರೂಪವಾಗಿ ಬೀರುವದು.

ಆದರೆ ಇವೆಲ್ಲವುಗಳಲ್ಲಿ ಮರೆಯಲ್ಲಿದ್ದ ಮಡದಿ ಸುಂದರವಾದುದು. ಕತೆಯು—ಕಮಲಾ ಶ್ರೀಧರನ ಹೆಂಡತಿ ಬಸುರಿ. ತವರುಮನೆಗೆ ಹೆರೆಯಲಿಕ್ಕೆ ಹೋಗುವಳು. ಶ್ರೀಧರನು ಅವಳ ಶೀಲದಲ್ಲಿ ಸಂಶಯ ತಳೆದು ಬಿಟ್ಟುಬಿಡುವನು. ಮುಂದೆ ಇಂದುವನ್ನು ಮದುವೆಯಾಗುವನು. ಮನೆಯಲ್ಲಿ ಶಂಕರನೆಂಬ ಅಡಿಗೆಯವ. ಮುಂದೆ ಅವನು ಲಕ್ಷ್ಮಮ್ಮನೆಂಬ ಅನಾಥೆಯನ್ನು ನಿಯಮಿಸಿ ಬಿಟ್ಟು ಹೊರಡುವನು. ಇಂದುವಿನ ಮಗಳಾದ ಸುಮಾನನ್ನು ಅಡಿಗೆಯವಳು ಮಗಳಂತೆ ನೋಡುವಳು. ಅದರ ದೈವ ಅದನ್ನು ಕಸಿದುಕೊಂಡು ಹೋಗುವದು. ಸರಿ. ಲಕ್ಷ್ಮಮ್ಮ ನೆಮ್ಮದಿಯಾಗಿದ್ದಳು. ಒಂದಿನ ಹಿತ್ತಿಲಲ್ಲಿ ಸಂತೋಷದಿಂದ ನಿಂತಿದ್ದಳು. ಶ್ರೀಧರನು ನೋಡಿ ಮೆಚ್ಚಿದ. ಲಕ್ಷ್ಮಮ್ಮನ ಮಗ ಶಂಕರನು ಕೆಲದಿನ ನಿಲ್ಲಲು ಬಂದನು. ತಂದೆ ಯಾರೆಂದು ಮನುವು ತಿಳಿಯದು. ಒಂದಿನ ಬಲವಂತದಿಂದ ತಾಯಿಯನ್ನು ಕೇಳಿದನು. ಲಕ್ಷ್ಮಮ್ಮನು ಸಂಕಟದಿಂದ ದುಃಖದಿಂದ ಹೇಳಿದಳು. ಇಂದು ಕೇಳಿದಳು. ತನ್ನಕ್ಕನೆಂದು ಧೃಢಪಟ್ಟಳು. ಶ್ರೀಧರನಿಗೆ ನಿರ್ದೋಷಿಯಾದ ಕಮಲಾ ಸಿಕ್ಕಳು.

ಕತೆಯಲ್ಲಿ ಪುರುಷನ ಸಾಶಂಕದರ್ಪ, ಸ್ತ್ರೀಯ ಕೋಮಲ ಸಹನೆ ಮೂರ್ತಿಮತ್ತಾಗಿ ಜೀವ ತುಂಬಿ ನಿಂತಿದೆ. ಶ್ರೀಧರನು ಶೀಲಪೂರ್ಣ ಸಂಶಯದಿಂದ ಮಡದಿಯನ್ನು ಬಿಟ್ಟರೂ ಆಕೆ ಕಾರಣವನ್ನು ಕೇಳುವದಿಲ್ಲ. ದೃಢತೆಗೆ ಪ್ರತ್ಯಕ್ಷ ಪ್ರಮಾಣವನ್ನು ಬಯಸುವದಿಲ್ಲ. ಅಲ್ಲದೆ ಇನ್ನೊಂದು ಮದುವೆಗೆ ಅಡ್ಡಿಯನ್ನೊಡ್ಡುವದಿಲ್ಲ. ಪತಿಯೇ ಸರ್ವಸ್ವವೆಂದು ತಿಳಿದ ಹಿಂದೂ ಸಾಧ್ವಿಯರಂತೆ ಅವರ ಮನೆಯಲ್ಲಿ ಅಡಿಗೆಯ ಕೆಲಸವನ್ನು ವಹಿಸಲು ನಾಚುವದಿಲ್ಲ. ತಾನು ಹಿರಿ ಮಡದಿಯಾದರೂ ಚಿಕ್ಕ ಸವತಿಯ ಯೋಗಕ್ಷೇಮದ ಮುಖಾಂತರ ಗಂಡನು ಸುಖವಾಗಿದ್ದರೆ ಸಾಕು ಎಂಬ ಉದಾತ್ತ ಧ್ಯೇಯಕ್ಕೆ ಅನುಗುಣವಾಗಿ ನಿಲ್ಲುವಳು. ಸುಧಾ ಸವತಿಯ ಮಗಳಾದರೂ ತನ್ನ ಗಂಡನ ಧರ್ಮಫಲವೆಂದು ಮಗಳಂತೆ ಕಾಪಾಡುವಳು. [ಶಂಕರನ ಮುಂದೆ ತನ್ನ ಗಂಡನ ಅವನ ತಂದೆಯ ಹೆಸರು ಹೇಳುವ ಮುಂದೆ, ಅಧಿಕಾರದಿಂದ ಕಸಿದುಕೊಳ್ಳಬೇಕೆಂದಾಗಲಿ, ಜೀವನವು ಹೊಂದಿಕೊಂಡು ಮಡದಿಯೆಂದು ಸ್ವೀಕರಿಸಲೆಂದಾಗಲಿ, ಆಶಿಸಿದವಳಲ್ಲ. ಆದರೆ ಪರಿಸ್ಥಿತಿಯು ಅವಳನ್ನು ಕೈಹಿಡಿದು ಮೇಲೆತ್ತುವದು. ೧೦—೧೨ ವರುಷ ಏಕನಿಷ್ಠಳಾಗಿ ಆದರಿಸಿದ ಶೀಲಪೂರ್ಣ ಬ್ರಹ್ಮಚರ್ಯ ವ್ರತದ ಫಲವು ಗಂಡನ ದೋಷ ಬೀಜವನ್ನು ಹೊಡೆದು ಹಾಕಿ ಕೈಹಿಡಿದು ಕರೆದುಕೊಳ್ಳಲು ಒತ್ತಾಯ ಪಡಿಸುವದು. ಇಂಥ ವಸ್ತುವಿನ ಕಥೆಯು ಸಂತೋಷದಲ್ಲಿಯೇ ಕೊನೆಗೊಳ್ಳುವದು ಹಿತವು. ಮಾಘದ ಪಟ್ಟಕ್ಕೆ ಇದೇ ಯೋಗ್ಯ.

## ಪುಸ್ತಕ ಮತ್ತು ವಿಮರ್ಶೆ

### ಮೂರಾಬಟ್ಟೆ

ಲೇ: ಶ್ರೀ ವಿ. ಎಂ. ಇನಾಮದಾರ, ಪ್ರಕಾಶಕರು: ರಂಗಮಂಗ ಪ್ರಕಾಶನ ಧಾರವಾಡ. ೨೪೪ ಪುಟ ಬೆಲೆ: ರೂ ೩-೧೫-೦

### ಭಗ್ನ ಮಂದಿರ

ಲೇ: ಶ್ರೀ 'ಹೇಮಂತ' ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ ೩೪೨ ಪುಟ, ಬೆಲೆ: ರೂ. ೪-೮-೦

ಇವೆರಡೂ ೧೯೪೨ ರಲ್ಲಿ ದೇಶದಲ್ಲಿ ಉಂಟಾದ ವಿಪ್ಲವವನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿಸಿದ ಕಾದಂಬರಿಗಳು ಶ್ರೀ ಇನಾಮದಾರರು ಈ ಸನ್ನಿವೇಶಗಳಲ್ಲಿ ಮೂರು ವ್ಯಕ್ತಿಗಳ ಜೀವನ ಮೂರಾಬಟ್ಟೆಯಾಗಿ ಹೋದುದನ್ನು ಚಿತ್ರಿಸಿದ್ದಾರೆ. ರಾಮಣ್ಣ ಸ್ವಾರ್ಥಿ, ಲಂಪಟ; ಶ್ಯಾಮಣ್ಣ ಉದಾತ್ತ, ದುರ್ಬಲ; ನಿರ್ಮಲೆಯೊ ಚಂಚಲೆ, ಭೋಗಪ್ರಿಯೆ. ಧಾರವಾಡದ ಚಿಕ್ಕ ನ್ಯಾಯಾಸ್ಥಾನಗಳಿಂದ ಏರಿ ಸಾಹಸ ಬಲದಿಂದ ಮುಂಬಯಿ ಹಾಯಕೋರ್ಟಿನ ವಕೀಲನಾದ ರಾಮಣ್ಣ ಹಾಯಕೋರ್ಟ ನ್ಯಾಯಾಧೀಶರಾದ ನಾನಾ ಸಾಹೇಬರ ಮಗಳು ನಿರ್ಮಲೆಯೊಡನೆ ಪ್ರೇಮ ಪ್ರಸಂಗದಲ್ಲಿ ಸಿಲುಕುತ್ತಾನೆ. ಇದರಲ್ಲಿ ಅವನದೆಷ್ಟೋ ಅಷ್ಟೇ—ಅಥವಾ ಅದಕಿಂತಲೂ ಹೆಚ್ಚು—ಅವಳ ತಪ್ಪು ಇದೆ. ಈ ನಡುವೆ ರಾಮಣ್ಣಗೆ ಸರಕಾರೀ ವಕೀಲನಾಗಿ ನೇಮಕ ಹೊಂದುವ ಸಂಧಿ ದೊರಕುವದಕ್ಕೂ ದೇಶದಲ್ಲಿ ಅಗಸ್ಟ ವಿಪ್ಲವ ಉರಿದೇಳುವದಕ್ಕೂ ಕಾಳೆದೀಳುವದು. ಪದವೀಧರನಾಗಿದ್ದರೂ ದೇಶಸೇವಾ ಬುದ್ಧಿಯಿಂದ ಬಡತನವನ್ನೇ ಅರಿಸಿಕೊಂಡು ಹಳ್ಳಿಯ ಸುಧಾರಣೆಯ ಮೋಹದಲ್ಲಿ ತನ್ನನ್ನೂ ತನ್ನ ತಾಯಿ ತಂಗಿಯರನ್ನೂ ಕ್ಲೇಶಕ್ಕೆ ಗುರಿಮಾಡಿದ್ದ ಶಾಮಣ್ಣ ಮನೆತನದ ತೊಡಕನ್ನು ಬಿಡಿಸಿಕೊಳ್ಳಲು ಹಳೆಯ ಗೆಳೆಯನಾದ ರಾಮಣ್ಣನಲ್ಲಿಗೆ ಮುಂಬಯಿಗೆ ಬರುವನು. ಈ ವಿಪ್ಲವದ ಸೆಳವಿಗೆ ಸಿಕ್ಕು ಸೆರೆಮನೆ ಕಾಣುತ್ತಾನೆ. ರಾಮಣ್ಣನ ದುರ್ದೈವಕ್ಕೆ ಅವನನ್ನು ಜೇಲು ಕಾಣಿಸುವ ವಿಚಾರಣೆಯಲ್ಲಿ ಸರಕಾರದ ಪರವಾಗಿ ವಾದಿಸುವ ಕೆಲಸ ರಾಮಣ್ಣಗೇ ಬರುವದು. ರಾಮಣ್ಣನ ಮನಸು ಮೊದಲು ಇದಕ್ಕೆ ತೊಳಲಾಡಿದರೂ ಅವನಲ್ಲಿದ್ದ ಸ್ವಾರ್ಥಿಯೂ ಕಾಮುಕನೂ ಆ ಕೆಲಸವನ್ನು ಅವನಿಂದ ಯಶಸ್ವಿಯಾಗಿ ಮಾಡಿಸುತ್ತಾರೆ. ಆದರೆ ನಿರ್ಮಲೆಯ ಮೇಲಿನ ಮೋಹದಿಂದ ಅವನು ಮಾಡಿದ ದೇಶದ್ರೋಹ, ಮಿತ್ರದ್ರೋಹಗಳು ವ್ಯರ್ಥವಾಗುವವು. ವಿವಾಹಪೂರ್ವ ಪ್ರೇಮದ ಅತಿರೇಕದಿಂದ ನಿರ್ಮಲೆ ಬಸಿರಿಯಾಗಲು ಅವಳ ಪ್ರಣಯಗೋಪುರ ಕುಸಿದಂತಾಗುವದು. ರಾಮಣ್ಣ ಅವಳನ್ನು ಮದುವೆಯಾಗಲೊಪ್ಪಿದರೂ ಅವಳ ತಾಯಿತಂದೆಗಳು ಒಪ್ಪುವದಿಲ್ಲ. ನಿರ್ಮಲೆಗೂ ಅಷ್ಟೊಂದು ಆಸ್ಥೆ ಉಳಿಯಲಿಲ್ಲ. ಇತ್ತ ರಾಮಣ್ಣ ಸೆರೆಮನೆಗೆ ಹೋದನಂತರ ಅವನ ತಾಯಿ ತಂಗಿ ನಿರ್ಗತಿಕರಾಗಿ ಮುಂಬಯಿಗೆ ರಾಮಣ್ಣನ ಆಶ್ರಯಕ್ಕೆ ಬಂದಾಗ ತಾಯಿ ಮಗನನ್ನು ಕಾಣಲಾರದೆ ಕೊರಗಿ ಸಾಯುವಳು. ತಾಯಿಯ ವಿಪನ್ನಾವಸ್ಥೆಯನ್ನು ಕೇಳಿದ ಶಾಮಣ್ಣ ಅವಳನ್ನು ಕಾಣುವಗೋಸುಗ ಸರಕಾರಕ್ಕೆ ಕ್ಷಮೆ ಬೇಡಿ ಹೊರಬಂದರೂ ಅಷ್ಟರಲ್ಲಿ ತಾಯಿ ಸತ್ತಿರುವದರಿಂದ ಅವನ ಆಸೆಯೂ ಮಣ್ಣಾಗುವದು. ಹೀಗೆ ಸ್ವಾರ್ಥ, ಉದಾತ್ತತೆ, ಕೌತುಕ ಇವು ಮೂರೂ ಪ್ರವೃತ್ತಿಗಳು ಸೋತು ದಿಕ್ಕೆಡುವವು.

ಶ್ರೀ ಹೇಮಂತರ "ಭಗ್ನ ಮಂದಿರ" ವಾದರೂ ಒಂದು ಬಗೆಯ ಮೂರಾಬಟ್ಟೆಯೆ. ಇಲ್ಲಿಯ ಮುಖ್ಯ ಪಾತ್ರಗಳು ಶ್ಯಾಮ, ಸುಶೀಲೆ, ಜಹಾಗಿರದಾರ ಶ್ಯಾಮ ದೃಢಚಿತ್ತ, ಜಹಾಗಿರದಾರ ಲಂಪಟ, ಸುಶೀಲೆ ಭೋಗ-ತ್ಯಾಗಗಳ ನಡುವೆ ಪರಿಸ್ಥಿತಿಯ ಬಿರುಗಾಳಿಯಲ್ಲಿ ಚಡಪಡಿಸುವವಳು. ಶೀಲೆಗೆ ಕಾಲೇಜಿನಲ್ಲಿ ಬಡವನಾಗಿದ್ದರೂ ಧೀರೋದಾತ್ತನಾದ ಶ್ಯಾಮನಲ್ಲಿ ಮನಸು ನಟುವದು; ಅವನಿಗಾದರೂ ಅವಳಲ್ಲಿ ಆದರ ಇಲ್ಲದಿಲ್ಲ; ಆದರೆ ತಂದೆಯ ಛಲ ನೋಡಿ ಮನೆತನದ ಬಡತನ, ಹೋಗಲಾಡಿಸಲು ಅವನು ಇನ್ನೊಬ್ಬಳನ್ನು ಮದುವೆಯಾಗಬೇಕಾಗುವದು. ಅದನ್ನೊಪ್ಪ ಮಾಡಿದ ಮೇಲೆ ಅತ ಶೀಲೆಯಿಂದ ದೂರ ಇರುತ್ತಾನೆ. ವಿಹ್ವಲೆಯಾದ ಶೀಲೆ ಅವನನ್ನು ಅರಸಲೆಳಸಿ ನಿರಾಶಳಾಗುವಳು. ಅಷ್ಟರಲ್ಲಿ ಮೊದಲಿಂದಲೇ ಅವಳ ಮೇಲೆ ಕಣ್ಣಿಟ್ಟಿದ್ದ ಶ್ರೀಮಂತ ಜಹಾಗಿರದಾರ-ಶ್ಯಾಮನ ಗೆಳೆಯ-ನಾನಾ ವಿಧದ ಸೋಗುಗಳಿಂದ ಅವಳನ್ನೊಲಿಸಿಕೊಳ್ಳಲು ಹೆಣಗಿ ಅಯಶಸ್ವಿಯಾಗುವ ಕೊನೆಗೆ ಸುಶೀಲೆಯ ತಂದೆಯೊಡನೆ ಸ್ನೇಹ ಬೆಳೆಸಿ ಅವರ ಕನಸಿನ ಧರ್ಮಾರ್ಥ ಆಸ್ಪತ್ರೆಯನ್ನು ಕಟ್ಟಿಸುವಲ್ಲಿ ನೆರವಾಗಿ ಮನೆತನದಲ್ಲೊಂದು ಸ್ಥಾನಗಳಿಸುವ. ಅಷ್ಟರಲ್ಲಿ ಅಗಸ್ಟ ಕ್ರಾಂತಿ ಪ್ರಾರಂಭವಾಗುವದು. ಶೀಲೆಯ ತಂದೆ ಸೆರೆಮನೆಗೆ ಹೋಗುವಾಗ ಅವಳನ್ನು ಜಹಾಗಿರದಾರನ ಪದರಿನಲ್ಲಿ ಹಾಕಿಹೋಗುವ. ಅಷ್ಟರಲ್ಲಿ ಜಹಾಗಿರದಾರನ ಅಂಗಸೌಷ್ಟವ, ಪ್ರಣಯ ಪ್ರದರ್ಶನ, ಅನುನಯಗಳಿಗೆ ಮನಸೋತು ಶೀಲೆ ಶ್ಯಾಮನನ್ನು ಮರೆಯತೊಡಗಿದ್ದಳು. ತಂದೆಯ ಸಮ್ಮತಿ ದೊರೆತ ಮೇಲೆ ಮತ್ತು ರಕ್ಷಕತೆಗೇ ಅವಳು ಸಿಕ್ಕಿದ ಮೇಲೆ ಅವರಿಬ್ಬರಲ್ಲಿ ದೇಹ ಸಂಬಂಧವೂ ಬೆಳೆಯುವದು. ಆಗ ರಂಗದಲ್ಲಿ ಮತ್ತೆ ಶ್ಯಾಮನ ಪ್ರವೇಶವಾಗುವದು. ಪೋಲೀಸ ಗೋಳೀಬಾರಿಗೆ ನಿರಪರಾಧಿಯಾದ ಅವನ ತಂಗಿ ಬಲಿಯಾಗಲು ಸಿಟ್ಟಿಗೆದ್ದ ಅವನು ಭಯೋತ್ಪಾದಕ ಗುಪ್ತ ಚಟುವಟಿಕೆಗಳನ್ನು ಸಂಘಟಿಸತೊಡಗಿ, ಗಾಯಾಳುಗಳಾದ ತನ್ನ ಸಂಗಡಿಗರ ಚಿಕಿತ್ಸೆಗಾಗಿ ಡಾ. ಕೃಷ್ಣರಾಯರ [ಶೀಲೆಯ ತಂದೆ]ಯ ಆಸ್ಪತ್ರೆಗೇ ಬರತೊಡಗುವನು. ಅವನ ಬರವಿನೊಡನೆ ಶೀಲೆಯ ಮನಸೂ ಇತ್ತಂಡವಾಗತೊಡಗುವದು. ಜಹಾಗಿರದಾರಗೆ ಅವರಲ್ಲಿ ವೃಥಾ ಸಂದೇಹವುಂಟಾಗಿ ಅವನು ಅವಳಲ್ಲಿ ತೀರ ಅಸಹ್ಯ ಕಾಮುಕ ವರ್ತನೆಯನ್ನಾರಂಭಿಸಿದ್ದರಿಂದ ಅವನ ಹೀನತೆಗೂ ಶ್ಯಾಮನ ನಿರ್ಭಯ, ನಿಃಸ್ವಾರ್ಥ ದೇಶಪ್ರೇಮಕ್ಕೂ ಹೋಲಿಸಿ ನೋಡಿದ ಶೀಲೆಗೆ ತನ್ನ ಹೃದಯ ನಿಜವಾಗಿ ಶಾಮನಿಗೇ ಸೇರಿತ್ತೆಂದೂ ಜಹಾಗಿರದಾರನತ್ತ ತನ್ನ ಅನುರಾಗ ಹೊರಳಿದ್ದು ಕೇವಲ ದೇಹಧರ್ಮದಿಂದ ಎಂದೂ ಮನವರಿಕೆಯಾಗಿ ಜಹಾಗಿರದಾರನ ಬಗ್ಗೆ ತುಚ್ಛೀಕಾರವುಂಟಾಗುವದು. ಈ ತುಚ್ಛೀಕಾರ ಒಮ್ಮೆ ಕುದಿದು ಬಂದ ಜಹಾಗಿರದಾರನ ಮೇಲೆ ಹರಿಹಾಯಲಾಗಿ ಅವನು ಅವಳನ್ನು ತ್ಯಜಿಸಿ ಹೋಗಿಬಿಡುವನು. ಅದೇ ಸಮಯಕ್ಕೆ ದೇಹದ ಪರಿವೆಯಿಲ್ಲದೆ ವಿದ್ರೋಹ ಕಾರ್ಯದಲ್ಲಿ ಆಸಕ್ತನಾಗಿದ್ದ ಶ್ಯಾಮ ಅಸಹನೀಯ ಹೊಟ್ಟೆನೋವಿನೊಡನೆ ಶೀಲೆಯ ಮನೆಗೆ ಬಂದುಬೀಳುತ್ತಾನೆ. ಅವನ ಅವಸಾನ ಕಾಲದಲ್ಲಿ ಅವರಿಬ್ಬರ ಪ್ರಣಯ ಉದ್ಗಾರವಾಗಿ ಹೊರಹೊಮ್ಮುವದು. ಅವಳ ಮಂದಿರವನ್ನು ಭಗ್ನವಾಗಿ ಮಾಡಿ ಶ್ಯಾಮ ಪರಲೋಕ ಯಾತ್ರೆ ಮಾಡಿದಾಗಲೆ ಅವನನ್ನು ಬೆನ್ನಟ್ಟಿದ ಪೋಲೀಸರು ಪ್ರವೇಶಿಸುವರು.

ಇದು ಈ ಎರಡು ಕಾದಂಬರಿಗಳ ಕಥಾಸಾರ. ಶ್ರೀ ಇನಾಂದಾರರು "ಮೂರಾಬಟ್ಟೆ"ಯ ಕಥನದಲ್ಲಿ ಬಹಳ ಹಿಡಿತವನ್ನು ತೋರಿಸಿದ್ದಾರೆ. ಅವರ ವರ್ಣನೆಗಳು, ಸಂಭಾಷಣೆಗಳು, ವಿವರಣೆಗಳು ಎಲ್ಲ ಹಿತಮಿತವಾಗಿವೆ. ಅನವಶ್ಯಕವಾದ ಒಂದು ಪರಿಚ್ಛೇದವೂ ಅದರಲ್ಲಿಲ್ಲವೆಂದರೂ ಸಲ್ಲುವದು. ಆದರೆ ಅವರ ಕಥೆಯಲ್ಲಿ ಗೌಣ ಪಾತ್ರವಾದ ಗೋವಿಂದಾಚಾರಿ ಹೊರತು ಮತ್ತಾವೊಂದು ಪಾತ್ರವೂ ಉದಾತ್ತ—ಏಕೆ—ದೃಢ—ಕೂಡ ಆಗಿಲ್ಲದಿರುವದರಿಂದ ಯಾವ ಪಾತ್ರದಲ್ಲಿಯೂ ಓದುಗನ ಸಹಾನುಭೂತಿ ಎಚ್ಚರಗೊಳ್ಳುವದಿಲ್ಲ. ಈ ಎಲ್ಲ ಪಾತ್ರಗಳೂ ಸಾಧಾರಣ—ಏಕೆ, ಶಿಕ್ಷಣದ ಒಪ್ಪವೊಂದಿಲ್ಲದಿದ್ದರೆ ಅದಕ್ಕಿಂತಲೂ ಕೆಳದರ್ಜೆಯ—ಯೋಗ್ಯತೆಯವು. ಮನೋದಾರ್ಢ್ಯದ ಅಭಾವವೇ ಈ ಮೂವರ ಮೂರಾಬಟ್ಟೆಯ ಮುಖ್ಯ ಕಾರಣ. ಗಾಂಧೀಭಕ್ತ ಶಾಮನಿಂದಾದರೂ ತುಸು ಮನೋದಾರ್ಢ್ಯವನ್ನು ನಿರೀಕ್ಷಿಸಬಹುದಾಗಿತ್ತು. ಅವನು ಕ್ಷಮಾಪಣೆ ಕೊಟ್ಟು ಹೊರ ಬಂದುದನ್ನು ಉಚಿತವೆಂದು ತೋರಿಸಿ ಕೊಡಲು ಲೇಖಕರು ಬಹಳ ಹೆಣಗಿದ್ದಾರೆ. ಅದು ಸಾಧಿಸಿಲ್ಲ. ತಾಯ ಅಸ್ವಸ್ಥದ ಸುದ್ದಿ ತಲುಪುವ ಮೊದಲೇ ಸೆರೆಮನೆಯ ಏಕಾಂತವಾಸ ಅವನ ಮನಸ್ಸನ್ನು ದುರ್ಬಲಗೊಳಿಸಿ ಕ್ಷಮಾಯಾಚನೆ[illegible] ಅದನ್ನು ಸಿದ್ಧಗೊಳಿಸಿತ್ತು. ತಾಯ ಅಸ್ವ[illegible] ಅವನ ಮನಸ್ಸಿಗೊಂದು ನೆವವನ್ನಷ್ಟೆ ಒದ[illegible]ತೆಂದು ಹೇಳಬೇಕಾಗುತ್ತದೆ. ಮೇಲಾಗಿ [illegible] ಯಲ್ಲಿ ಈ ಶಾಮಣ್ಣನ ಸ್ಥಾನವೆಲ್ಲಿ? ನಿರ್ಮಲೆಯರ ಉನ್ಮತ್ತ ಪ್ರಣಯ[illegible] ಈ ಕಥ[illegible] ರಾಮಣ್ಣ[illegible] [illegible]ದಿಂದ ಹಿ[illegible]

[illegible]ನೇ ಪುಟಕ್ಕೆ

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಸರದಾರರ ಉಪದೇಶ

ಸರದಾರ ವಲ್ಲಭಭಾಯಿ ಪಟೇಲರು ಕಳೆದ ವಾರ ತಮ್ಮ ಗುಜರಾಥ ಸಂಚಾರದ ಕಾಲಕ್ಕೆ ಮಾಡಿದ ಭಾಷಣಗಳನ್ನು ಹಿಂದೀಯರೆಲ್ಲರೂ ಮನನ ಮಾಡಿ ಅದರಂತೆ ನಡೆಯುವದು ಅವಶ್ಯವಾಗಿದೆ. ದೇಶದ ಕ್ರಾಂತಿಯಲ್ಲಿ ಮುಂದಾಳ್ತನ ವಹಿಸಿದವರೂ ಈಚೆಗೆ ನಡುಗಾಲ ಸರಕಾರದ ಮಂತ್ರಿಗಳಾಗಿ ಆಡಳಿತದ ಅನೇಕ ತೊಡಕುಗಳ ಅನುಭವವನ್ನು ಪಡೆದವರೂ ಆದ ಅವರು ರಾಷ್ಟ್ರದ ಮುಂದಿರುವ ಹಲವು ಸಮಸ್ಯೆಗಳನ್ನು ನಿಚ್ಚಳವಾಗಿ ನಮ್ಮ ಮುಂದಿರಿಸಿದ್ದಾರೆ. "ಸ್ವತಂತ್ರ ಹಿಂದುಸ್ತಾನದ ರಾಜ್ಯಭಾರ ಮಾಡುವದು ಸುಲಭವಾದ ಮಾತಲ್ಲ. ಬೇನೆ ಬಿದ್ದವರನ್ನು ಪುನಃ ದೈನಂದಿನ ಕಾರ್ಯಗಳಲ್ಲಿ ತೊಡಗಿಸುವಷ್ಟು ಕಠಿನ ಕಾರ್ಯವದು" ಎಂದು ಅವರು ಸಾರಿದರು. ಈ ಮಾತನ್ನು ಸರದಾರರಂಥ ಸಮರ್ಥರು ಆಡಿ ತೋರಿಸಿದ್ದು ಯೋಗ್ಯವೇ ಆಗಿದೆ. ದೇಶದಲ್ಲಿ ಇಂದು ನಾನಾ ವಿಧ ವಿಪತ್ತಿಗಳು ಹಬ್ಬಿವೆ. ಬೇರೆ ಬೇರೆ ಬಗೆಯ ನಿಯಂತ್ರಣಗಳು, ತುಟಾಗ್ರತೆಗಳು ಜನರನ್ನು ಪೀಡಿಸುತ್ತಲೆ ಇರುವದರಿಂದ ಕಾಂಗ್ರೆಸ್ಸಿನ ಬಗ್ಗೆ ಜನರಲ್ಲೊಂದು ಬಗೆಯ ನಿರಾಶೆ ಉತ್ಪನ್ನವಾಗಿದೆ. ಈ ಪರಿಸ್ಥಿತಿಯ ಪ್ರಯೋಜನವನ್ನು ಪಡೆದು ವಿಶಿಷ್ಟ ಹಿತಸಂಬಂಧಗಳುಳ್ಳವರೂ ಜಾತೀಯತೆಯ ಆರಾಧಕರೂ ವಿದೇಶೀ ರಾಜಕೀಯ ಸಾಮಾಜಿಕ ರಾಜಕೀಯ ಪದ್ಧತಿಯ ಅಂಧಾನುಯಾಯಿಗಳೂ ತಮ್ಮ ಬೇಳೆ ಬೇಯಿಸಿಕೊಳ್ಳುವಗೋಸ್ಕರ ಜನತೆಯ ಬೆಂಬಲಕ್ಕಾಗಿ ಹೆಣಗತೊಡಗಿದ್ದಾರೆ. ಅವರ ಪ್ರಚಾರಕ್ಕೆ ಅನೇಕರು ಬಲಿಬಿದ್ದುದೂ ಕಾಣಬರುತ್ತದೆ. ಆದರೆ ಇಂಥ ಕ್ಷೋಭೆಗಳನ್ನು ಹೆಚ್ಚಿಸುವದರಿಂದ ಕಾಂಗ್ರೆಸ ಸರಕಾರಗಳ ಸ್ಥಾನದಲ್ಲಿ ಕ್ಷಣಕಾಲ ಮಿನೆ ರಾಜ್ಯಭಾರ ಬಂದೀತು ಮತ್ತೇನೂ ಫಲವಿಲ್ಲೆಂದು ಸರದಾರರು ಎಚ್ಚರವಿತ್ತರು. ಕ್ರಾಂತಿಯೆಬ್ಬಿಸಬೇಕೆಂದೂ ರಶಿಯಾದಂಥ ಸಮಾಜ ರಚನೆಯನ್ನು ಇಲ್ಲಿಯೂ ಸ್ಥಾಪಿಸಬೇಕೆಂದೂ ಕನಸು ಕಾಣುವವರ ಮಾತಿಗೆ ಮರುಳಾದರೆ ಹಿಂದುಸ್ತಾನ ಅಧೋಗತಿಯನ್ನು ಕಾಣದಿರದು. ಹಳ್ಳಿಗಳಲ್ಲಿ ರೈತರ ತಂಟೆಗಳನ್ನೂ ಕೂಲಿಕಾರ ತಂಟೆಗಳನ್ನೂ ಉತ್ತೇಜನಗೊಳಿಸುವದರಿಂದ ಶಾಂತ ವಾತಾವರಣದಲ್ಲಿ ಮಾತ್ರ ಸಾಧ್ಯವಾದ ಸರ್ವತೋಮುಖ ಸಮೃದ್ಧಿಯ ಯೋಜನೆಗಳು ಅಸಾಧ್ಯವಾಗುವವೆಂಬದನ್ನು ಎಲ್ಲರೂ ಮನಗಾಣಬೇಕು. ಚೀನದ ಅಧೋಗತಿಯನ್ನು ನೋಡಿಯಾದರೂ ನಾವು ಕಮ್ಯುನಿಸ್ಟರಿಂದ ದೂರಇರಬೇಕು. ಶಾಂತಿಯೊಂದಿದ್ದರೆ ಸರ್ವರಿಗೂ ನ್ಯಾಯವನ್ನು ಕೊಡುವ ರಾಜ್ಯಪದ್ಧತಿ ಕಟ್ಟಬಲ್ಲೆವೆಂದು ಅವರು ಹೇಳಿದ್ದಾರೆ. ಆದರೆ ಇದಕ್ಕೆ ಜನರು ಪ್ರಯತ್ನ ಪಡಬೇಕಲ್ಲದೆ ಬರಿ ವಿರೋಧ ಮಾಡಿದರೆ ಸಾಗದು. ಅಸಂತೋಷ ಹಬ್ಬಿಸುವ ಕಾರ್ಯದಲ್ಲಿ ನಿರತರಾಗುವ ಬದಲು ತರುಣರು ರಾಜ್ಯಭಾರದ ಹೊಣೆ ಹೊರಲು ಮುಂದೆ ಬರಬೇಕು. ರಾಜ್ಯಾಡಳಿತವನ್ನು ಸಾಗಿಸಬಲ್ಲ ಜನರು ನಮ್ಮಲ್ಲಿ ಸಾಕಷ್ಟಿಲ್ಲ. ಆಯ. ಸಿ. ಎಸ್. ಅಧಿಕಾರಿಗಳು ಮನೆಗೆ ಹೋಗಲಿದ್ದಾರೆ. ವಿದೇಶಗಳಲ್ಲಿ ರಾಯಭಾರಿತ್ವಕ್ಕೆ ಜನರು ಬೇಕಾಗಿದ್ದಾರೆ. ಈ ಕೆಲಸಗಳಿಗೆ ವಿಶೇಷ ತರಬೇತಿ ಬೇಕಾಗಿರುವದು. ಕೇವಲ ಸ್ವರಾಜ್ಯಕ್ಕಾಗಿ ಸೆರೆಮನೆಗೆ ಹೋಗಿಬಂದ ಅರ್ಹತೆಯೊಂದೇ ಸಾಲದು" ಎಂದೂ "ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು ಹೋರಾಟಕ್ಕಿಂತಲೂ ಬಿಗಿಯಾದ್ದು" ಎಂದೂ ಅವರು ಹೇಳಿದುದನ್ನು ಚನ್ನಾಗಿ ಮನದಂದು ದೇಶದ ತರುಣರು ರಾಜ್ಯಭಾರ ಕಾರ್ಯದಲ್ಲಿ ತರಬೇತಿ ಹೊಂದಲು ಮುಂದೆ ಬರಬೇಕು. ಪೋಲೀಸ ಕೆಲಸದಿಂದಾರಂಭಿಸಿ ಎಲ್ಲ ರಂಗಗಳಲ್ಲಿಯೂ ಇಂದು ಆಡಳಿತದಲ್ಲಿ ಹೊಸ ರಕ್ತ ತುಂಬಬೇಕಾಗಿದೆ. ಅದೊಂದೇ ದಾರಿಯಿಂದ ನಾವು ಲಂಚಗುಳಿತನ, ಆಲಸ್ಯ ಮೊದಲಾದವುಗಳ ಕೊಂಪೆಯಾದ ನೌಕರಶಾಹಿಯ ರೂಪವನ್ನು ಬದಲಿಸಿ ನಿಜವಾದ ಶಾಂತಿ ಸುಖ ಸಮೃದ್ಧಿಗಳನ್ನು ಸ್ಥಾಪಿಸಬಹುದು.

## ಕಾಂಗ್ರೆಸ್ಸನ್ನು ವಿಸರ್ಜಿಸಬೇಕೆ ?

ಸರದಾರ ಪಟೇಲರು ತಮ್ಮ ಭಾಷಣಗಳಲ್ಲಿ ಸ್ವಾತಂತ್ರ್ಯ ಲಭಿಸಿದೊಡನೆ ಕಾಂಗ್ರೆಸ ಸಂಸ್ಥೆಯನ್ನು ವಿಸರ್ಜಿಸಬೇಕೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ಈ ಮಾತು ಕಾಂಗ್ರೆಸ ಮುಂದಾಳುಗಳ ಬಾಯಿಂದ ಹೊರಬಿದ್ದುದು ಇದೇ ಮೊದಲನೆ ಬಾರಿಯಲ್ಲವೆಂಬುದೇನೋ ನಿಜ. ಆದರೂ ಈಗ ಸ್ವರಾಜ್ಯವೆಂಬುದು ಇನ್ನೂ ಅಜ್ಞಾತ ಭವಿಷ್ಯದ ಮಾತಾಗಿರದೆ ಬರಿ ಕೆಲ ತಿಂಗಳುಗಳದಾಗಿರುವದರಿಂದ ಈ ವಿಷಯಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಕ್ರಾಂತಿಕಾರಿ ಮತ್ತು ಅಧಿಕಾರ ಗ್ರಹಣ ಇವೆರಡೂ ಚಟುವಟಿಕೆಗಳನ್ನು ಕಾಂಗ್ರೆಸ್ಸು ಕೈಕೊಂಡ ನಂತರ ಕಾಂಗ್ರೆಸ್ಸಿನೊಳಗೆ ಹಲವು ಕೋಳೆಗಳು ಸೇರಿಕೊಂಡಿವೆಯೆಂಬುದು ಗೊತ್ತಿದ್ದ ಮಾತು. ಸರದಾರರು ತಮ್ಮ ಭಾಷಣದಲ್ಲಿ ದೇಶದಲ್ಲಿ ಮಾತ್ರವಲ್ಲ, ಕಾಂಗ್ರೆಸ್ಸಿನಲ್ಲಿಯೂ ಹೊಕ್ಕಿರುವ ಅಧಿಕಾರ ಲಾಲಸೆ, ಸಂಧಿಸಾಧಕತೆ, ಸ್ವಾರ್ಥ ಸಾಧನೆಗಳ ಮನೋವೃತ್ತಿಯನ್ನು ಕುರಿತು ನೊಂದ ನುಡಿಗಳನ್ನಾಡಿದರು. ಕಳೆದ ಚುನಾವಣೆಗಳ ನಂತರವಂತೂ ಕಾಂಗ್ರೆಸ್ಸಿನ ಈ ಹುಳುಕುಗಳು ಬಹಿರಂಗವಾಗಿ ತೋರಿಸಿಕೊಳ್ಳುತ್ತಿವೆ. ಕಾಂಗ್ರೆಸ್ಸಿನ ವರಿಷ್ಠ ನಾಯಕರ ಹೆಸರು ಹೇಳಿ ಮತ ದೊರಕಿಸಿಕೊಂಡ ಅನೇಕರು ಕಾಂಗ್ರೆಸ್ಸಿನ ಹೆಸರಿಗೆ ಕಳಂಕ ಬರುವಂತೆ ಆಚರಿಸುವದನ್ನು ಕಾಣುತ್ತೇವೆ. ಇದು ಸರದಾರರ ಪ್ರತಿಪಾದನೆಗೆ ಒಂದು ಕಾರಣವಾಗಿರಬಹುದು. ಇತರ ಕಾರಣಗಳನ್ನೂ ಊಹಿಸಿಕೊಳ್ಳಲೆಡೆಯುಂಟು: ಕಾಂಗ್ರೆಸ್ಸು ದೇಶವನ್ನು ವಿದೇಶೀ ಆಳಿಕೆಯಿಂದ ವಿಮೋಚನಗೊಳಿಸಲು ಸ್ಥಾಪಿತವಾದ ಮತ್ತು ಹೆಣಗಿದ ಸಂಸ್ಥೆ. ಅದು ಗಾಂಧೀಜಿಯ ಯುಗದಲ್ಲಿ ಅನೇಕ ಸಾಮಾಜಿಕ ಧ್ಯೇಯಗಳನ್ನೂ ಆರ್ಥಿಕ ತತ್ವಗಳನ್ನೂ ಅಂಗೀಕರಿಸಿದ್ದರೂ ವಿದೇಶೀಯರನ್ನು ಅಟ್ಟುವದರಲ್ಲಿ ಆಸ್ಥೆಯುಳ್ಳವರೆಲ್ಲರನ್ನು ಬರಮಾಡಿಕೊಳ್ಳಲು ಸಿದ್ಧವಿದ್ದುದರಿಂದ ಅದರ ಸ್ವರೂಪ ಸಮಾನಧರ್ಮದ್ದಾಗಿರದೆ ವಿಶಾಲ ಧರ್ಮದ್ದಾಗಿತ್ತು. ಅದರಲ್ಲಿ ಕೆಲಸ ಮಾಡುತ್ತಿರುವ ಅನೇಕ ಸತ್ವಗಳು ಪರಸ್ಪರ ವಿರುದ್ಧವಾಗಿದ್ದರೂ ಮುಖ್ಯ ಧ್ಯೇಯ ಒಂದೇ ಆಗಿದ್ದರಿಂದ ಮತ್ತು ಅದು ಸಾಧಿಸದಿರುವ ವರೆಗೆ ಅಂತಃ ಕಲಹವಿಲ್ಲದೆ ಸಾಮರಸ್ಯದಿಂದ ಸಾಗಿದವು. ಆದರೆ ಆ ಧ್ಯೇಯ ಸಾಧ್ಯವಾಗುವ ನಿಶ್ಚಿತ ಲಕ್ಷಣ ತೋರಿದೊಡನೆ ಅವುಗಳು ತಮ್ಮ ನಿಜರೂಪದಲ್ಲಿ ಕಾಣಿಸಿಕೊಳ್ಳತೊಡಗಿದ್ದು, ಸ್ವಹಿತ ರಕ್ಷಣೆಗೆ ಟೊಂಕ ಕಟ್ಟುತಿರುವದು ದಿನ ಹೋದಂತೆ ಹೆಚ್ಚು ಸ್ಪಷ್ಟವಾಗುತಿದೆ. ಕಾಂಗ್ರೆಸ್ ಸರಕಾರಗಳ ಆಡಳಿತದ ಚಕ್ರ ಸರಾಗವಾಗಿ ಸಾಗದಿರಲು ಕಾಂಗ್ರೆಸ್ಸಿನೊಳಗಿರುವ ಈ ಪರಸ್ಪರವಿರುದ್ಧ ಹಿತಸಂಬಂಧಗಳ ಎಳೆದಾಟವೂ ಒಂದು ಕಾರಣವೆನ್ನಬಹುದು. ಏನು ಜಾತೀಯ, ಏನು ಆರ್ಥಿಕ, ಏನು ಸಾಮಾಜಿಕ ಹೀಗೆ ಹಲಬಗೆಯ ಎಳೆದಾಟಕ್ಕೆ ಕಾಂಗ್ರೆಸ್ಸು ಆಗರವಾಗುತಿರುವಂತೆ ತೋರುತ್ತದೆ. ಅದರಿಂದ ಇಡಿ ಸಂಸ್ಥೆಯನ್ನೆ ವಿಸರ್ಜಿಸಿ ಹೆಚ್ಚು ಸಮಾನಧರ್ಮದ ಹೊಸ ರಾಜಕೀಯ ಸಂಸ್ಥೆಗಳನ್ನು ಅಸ್ತಿತ್ವಕ್ಕೆ ತರುವದೊಳಿತೆಂದು ಸರದಾರರಿಗೆ ತೋರಿರಬಹುದು. ಆದರೆ ಕಾಂಗ್ರೆಸ್ಸು ಕೇವಲ ರಾಜಕೀಯ ಹೋರಾಟಕ್ಕಾಗಿ ಮೀಸಲಿರದೆ, ಅನೇಕ ಸಾಮಾಜಿಕ ಆರ್ಥಿಕ ಧ್ಯೇಯಗಳನ್ನೂ ಇಟ್ಟುಕೊಂಡು ಕೆಲಸ ಮಾಡುತ್ತ ಬಂದಿದೆಯೆಂದೂ ಜನಸಾಮಾನ್ಯದಲ್ಲಿ ಅದರ ಪ್ರಭಾವ ಬೆಳೆಯಲು ಅದು ಬಡವರ ಕೈವಾರಿಯಾಗಲು ನಿರ್ಧರಿಸಿದ್ದೂ ಒಂದು ಕಾರಣವೆಂದೂ ನಾವು ಮರೆಯಬಾರದು. ವರ್ಗ ಕಲಹದ ಬದಲು ವರ್ಗಸಾಮರಸ್ಯದ ಧ್ಯೇಯವನ್ನು ಅದು ಇಟ್ಟುಕೊಂಡಿದ್ದು ಈ ಧ್ಯೇಯದ ಮತ್ತು ಇತರ ಸುಧಾರಣೆಗಳ ಸಲುವಾಗಿ ಅದು ಇನ್ನಾದರೂ ಚಟುವಟಿಕೆ ನಡೆಸುವದು ಅಪೇಕ್ಷಣೀಯವಾಗಿದೆ. ಅದುದರಿಂದ ಮಹಾ ಪ್ರಯಾಸದಿಂದ ಕಟ್ಟಿದ ಸಂಸ್ಥೆಯನ್ನು ವಿಸರ್ಜಿಸುವ ಬದಲು ಅದರಲ್ಲಿ ಸೇರಿದ ಕೊಳೆಯನ್ನೂ ವಿಷಮಧರ್ಮತೆಯನ್ನೂ ಹೋಗಲಾಡಿಸಿ ಆದರ್ಶ ಸಮಾಜ ರಚನಗಾಗಿ ಹೆಣಗುವ ಬಲಿಷ್ಠ ರಾಜಕೀಯ ಸಂಸ್ಥೆಯಾಗಿ ಕಟ್ಟಲು ಸಾಧ್ಯವಾಗುವಂತೆ ಅದರ ಘಟನೆಯನ್ನು ಬದಲಿಸುವದು ವಿಹಿತವಲ್ಲವೆ ?

## ಆಹಾರ ಧಾನ್ಯವನ್ನು ಹೇಗೆ ಹೆಚ್ಚಿಸಬೇಕು

ಆಹಾರ ಧಾನ್ಯವನ್ನು ಹೆಚ್ಚು ಬೆಳೆಯಬೇಕೆಂದು ಸರಕಾರದವರು ಕಳೆದ ೫-೬ ವರ್ಷಗಳಿಂದ ಪ್ರಯತ್ನಪಡಹತ್ತಿದ್ದಾರೆ. ಅದರ ಪ್ರಚಾರಕ್ಕಾಗಿ ಕೋಟಿಗಟ್ಟಲೆ ಹಣವೆಚ್ಚ ಮಾಡಿದರು, ಇನ್ನೂ ಮಾಡುತ್ತಿರುವರು. ಯುದ್ಧಕಾಲದಲ್ಲಿ ಪರಕೀಯ ಸರಕಾರವು ರಾಜ್ಯಭಾರ ಮಾಡುತ್ತಿತ್ತಲ್ಲದೆ ಸೈನ್ಯಕ್ಕಾಗಿ ಆಹಾರ ಬೇಕೆಂದು ಅವರು ಪ್ರಯತ್ನ ಪಡುತ್ತಿದ್ದರು. ಆದ್ದರಿಂದ ಅವರ ಪ್ರಚಾರ ಕಾರ್ಯಕ್ಕೆ ಸಾಕಷ್ಟು ಜನತೆಯ ಬೆಂಬಲ ಸಿಕ್ಕಲಿಲ್ಲ. ಮತ್ತು ಆಗಿನ ಅಧಿಕಾರಿಗಳಾದರೂ ಜನತೆಯ ವ್ಯವಹಾರಿಕ ಸೂಚನೆಗಳಿಗೆ ಕಿವಿಗೊಡದೆ ದೊಂಕು ಒಡ್ಡುಗಳ ಸಲುವಾಗಿ ಹಣವನ್ನು ವ್ಯರ್ಥವಾಗಿ ಹಾಳುಮಾಡಿದರು. ಅದೆಲ್ಲ ಆದದ್ದು ಆಗಿಹೋಯಿತು. ಈಗ ಲೋಕಪ್ರತಿನಿಧಿಯಾದ ಸರಕಾರವು ರಾಜ್ಯ ಭಾರ ಮಾಡುತ್ತಿದೆ. ಇನ್ನು ಮುಂದೆಯಾದರೂ ಆಹಾರಧಾನ್ಯ ಬೆಳೆಯಲು ಒಕ್ಕಲಿಗರು ಉತ್ಸಾಹಪೂರಿತರಾಗಿ ಮುಂದೆ ಬಂದು ಹುಟ್ಟುವಳಿಯನ್ನು ಹೆಚ್ಚಿಸುವರೆಂದು ಆಶೆಮಾಡಲಾಗಿತ್ತು. ಆದರೆ ಅದೂ ಸಾಕಷ್ಟು ಕೈಗೂಡಿಲ್ಲೆಂದು ವ್ಯಸನದಿಂದ ಹೇಳಬೇಕಾಗಿದೆ. ಮತ್ತು ಸರಕಾರದವರು ಈಗಿನ ಮಾರ್ಗದಿಂದ ಸಾಗಿದರೆ ಆಹಾರ ಧಾನ್ಯದ ಹುಟ್ಟುವಳಿಯು ಹೆಚ್ಚುವದೆಂದು ನಮಗೆ ತೋರುವದಿಲ್ಲ. ಮೊನ್ನೆ ಮುಂಬಯಿ ಸರಕಾರದ ಒಕ್ಕಲತನಖಾತೆಯ ಮಂತ್ರಿಗಳು ಆಕಾಶವಾಣಿಯಲ್ಲಿ ಈ ವಿಷಯವನ್ನು ಎತ್ತಿ ಮಾತಾಡಿದರು. ಕೇಂದ್ರ ಸರಕಾರದ ಆಹಾರ ಖಾತೆಯ ಮಂತ್ರಿಗಳಾದ ಬಾಬೂ ರಾಜೇಂದ್ರ ಪ್ರಸಾದರು ಆಹಾರ ಪರಿಸ್ಥಿತಿಯನ್ನು ವಿವರಿಸಿ ಹೇಳಿದರು. ಒಕ್ಕಲತನ ಖಾತೆಯವರು ಪೂರೈಸುತ್ತಿರುವ ಅಂಕಿಸಂಖ್ಯೆಗಳನ್ನು ಕಾಗದದಮೇಲೆ ಹಾಕಿಕೊಂಡು ಲೆಕ್ಕ ಮಾಡಿದರೆ ಭೂಮಿಯಲ್ಲಿ ಆಹಾರ ಧಾನ್ಯವು ಬೆಳೆಯುವದಿಲ್ಲ. ಒಕ್ಕಲತನ ಖಾತೆಯಲ್ಲಿಯ ನೌಕರರ ಸಂಖ್ಯೆಯನ್ನು ಬೆಳೆಸುವದರಿಂದ ಆಹಾರ ಧಾನ್ಯ ಹೆಚ್ಚಾಗುವದಿಲ್ಲ. ಭಾವಿಗಳನ್ನು ತೋಡಿಸಲು ಇಂತಿಷ್ಟು ಹಣವನ್ನು ಮಂಜೂರು ಮಾಡಲಾಗಿದೆಂದು ಪ್ರಕಟಿಸಿದರೆ ಆಹಾರಧಾನ್ಯ ಬೆಳೆಯುವದಿಲ್ಲ. ನೀರಾವರಿಗಾಗಿ ಆಯಿಲ್ ಇಂಜನಗಳನ್ನು ಕೊಡುತ್ತೇವೆಂದು ಪರಿಪತ್ರಗಳನ್ನು ಕಳಿಸುವದರಿಂದ ಆಹಾರಧಾನ್ಯ ಬೆಳೆಯುವದಿಲ್ಲ. ಯೋಜನೆಗಳನ್ನು ಸಿದ್ಧಗೊಳಿಸಿ ಅವುಗಳನ್ನು ಪ್ರಕಟನಾ ಖಾತೆಯ ಮುಖಾಂತರ ಪ್ರಕಟಿಸುವದರಿಂದ ದೇಶದಲ್ಲಿ ಆಹಾರಧಾನ್ಯ ಹೆಚ್ಚಾಗಿ ಬೆಳೆಯುವದಿಲ್ಲ. ಪತ್ರಿಕಾಕಾರರಿಗೆ ಟೀಕೆ ಮಾಡುವದಿಷ್ಟೇ ಗೊತ್ತು ನಮ್ಮ ತೊಂದರೆಗಳೇನಿವೆಂಬುದು ಅವರಿಗೇನು ಗೊತ್ತು ಎಂದು ಕೇಳುವದರಿಂದಲೂ ಆಹಾರ ಧಾನ್ಯ ಬೆಳೆಯುವದಿಲ್ಲ. ಹಳ್ಳಿಗಳಲ್ಲಿಯ ಜನರು ನಮ್ಮ ಮಂತ್ರಿಮಂಡಳದವರು ಕೊಡುತ್ತಿರುವ ಆಶ್ವಾಸನಗಳಮೇಲೆ ವಿಶ್ವಾಸವಿಡದಂತಾಗಿದೆ. ಮಂತ್ರಿಗಳ ಭಾಷಣಗಳು ಕೇವಲ ಔಪಚಾರಿಕ ಮಾತುಗಳೆಂದು ತಿಳಿಯಲಾಗಹತ್ತಿದೆ. ಒಕ್ಕಲಿಗರು ಬಯಸುವ ಯಾವಧಾನ್ಯಕ್ಕಾದರೂ ಈಗಿನ ಪರಿಸ್ಥಿತಿಯ ಮೂಲಕ ಬೆಲೆ ಬರುತ್ತಿರುವದರಿಂದ ಒಕ್ಕಲತನದ ಸಲುವಾಗಿ ಇತ್ತೀಚೆಗೆ ರೈತನು ಆತುರಪಡುತ್ತಾನೆ. ಆದರೆ ಸರಕಾರದಿಂದ ಸಿಗಬೇಕಾದ ಸಹಾಯವು ಸಕಾಲಕ್ಕೆ ಸಿಗುವದಿಲ್ಲ. ಭಾವಿಗಳನ್ನು ತೋಡಿಸಲು ಹಣವನ್ನು ಮಂಜೂರ ಮಾಡಿಸಿಕೊಂಡು ಅದನ್ನು ತಂದು ಉಪಯೋಗ ಮಾಡಿಕೊಳ್ಳಲು ಐದಾರು ತಿಂಗಳ ಬೇಕಾಗುವವು. ಒಕ್ಕಲಿಗನು ಮಧ್ಯದಲ್ಲಿ ಅನೇಕ ಅಳಿ ಗೋಪಾಳರ ಕೈಕಾಲು ಹಿಡಿದುಕೊಳ್ಳಬೇಕಾಗುವದು. ಇದಲ್ಲದೆ ಸರಕಾರದವರು ಕೊಡುವ ಹಣವು ಭಾವಿಯ ಖಾರಿಯನ್ನು ಕೂಡ ಕಟ್ಟಲು ಸಾಕಾಗುವದಿಲ್ಲ. ಈ ಹಣಕ್ಕಾಗಿ ಅರ್ಜಿಯನ್ನು ಮಾಡಿದವರು ತಮ್ಮ ಅನುಭವವನ್ನು ಹೇಳುತ್ತಾರೆ. ಆಯಿಲ್ ಇಂಜನ್‌ಗಳಿಗಾಗಿ ಅರ್ಜಿ ಮಾಡಿದವರ ಹಣೆಬರಹವೂ ಅದರಂತೆ ಇದೆ. ಒಕ್ಕಲತನ ರೆವಿನ್ಯೂ ಪಬ್ಲಿಕ್ ವರ್ಕ್ಸ ಖಾತೆಗಳು ಸ್ವತಂತ್ರವಾಗಿ ಕೆಲಸ ಮಾಡುವದರಿಂದ ಆಯಾ ಖಾತೆಯವರು ತಮ್ಮ ತಮ್ಮೊಳಗೆ ಕೇವಲ ಕಾಗದ ಕುದುರೆಗಳನ್ನು ಓಡಾಡಿಸುತ್ತಾರೆ. ಗೊಬ್ಬರಕ್ಕಾಗಿ ಹಿಂಡಿಯನ್ನು ಹಂಚುವ ವಿಷಯದಲ್ಲಿ ಅನೇಕ ದೂರುಗಳಿವೆ. ಧಾರವಾಡ ಜಿಲ್ಲೆಯ ಕೆಲವು ತಾಲೂಕುಗಳಲ್ಲಿ ಪುರಾತನ ನೀರಾವರಿ ಕೆರೆಗಳಿವೆ. ಆ ಕೆರೆಗಳಿಂದ ಭತ್ತದ ಗದ್ದೆಗಳಿಗೆ ನೀರು ಹೋಗಲು ಕಾಲುವೆಗಳಿವೆ. ಅವುಗಳು ಇತ್ತೀಚೆಗೆ ಮಣ್ಣು ಹೆಚ್ಚಾಗಿ ಹುಗಿದು ಹೋಗಿವೆ. ಅವುಗಳಲ್ಲಿಯ ಮಣ್ಣನ್ನು ತೆಗೆದು ಹಾಕಿ ಕಾಲುವೆಗಳನ್ನು ಸ್ವಚ್ಛಮಾಡಿದರೆ ಭತ್ತದ ಬೆಳೆಯ ಹುಟ್ಟುವಳಿಯು ಆಯಾ ಹೊಲಗಳಲ್ಲಿ ೧೦೦ಕ್ಕೆ ೨೫ ರಷ್ಟಾದರೂ ಹೆಚ್ಚಿಗೆ ಬರುತ್ತದೆ. ಕಳೆದ ನಾಲ್ಕಾರು ವರ್ಷಗಳಿಂದ ರೈತರು ಅರ್ಜಿ ಹಾಕಿದರೂ ಅವರ ಕಡೆಗೆ ಯಾರೂ ಲಕ್ಷ ಕೊಡುವದಿಲ್ಲ. ಇಂತಹ ಅನೇಕ ಮಾರ್ಗಗಳು ಆಹಾರ ಧಾನ್ಯ ಹೆಚ್ಚಿಸಲು ಇವೆ. ಆದರೆ ಅವುಗಳನ್ನು ಬಿಟ್ಟು ಐದು ವರ್ಷಗಳಲ್ಲಿ ಆಹಾರಧಾನ್ಯದ ಹುಟ್ಟುವಳಿಯು ಇಮ್ಮಡಿಯಾಗುತ್ತದೆಂದು ಭಾಷಣ ಮಾಡುತ್ತ ಹೋದರೆ ಹಳ್ಳಿಗಳಲ್ಲಿಯ ಒಕ್ಕಲಿಗರು ನಗುತ್ತಾರೆ.

## ನಮ್ಮ ರೂಪಾಯಿಯ ಬೆಲೆ

ರಿಝರ್ವ ಬ್ಯಾಂಕಿನ ಕಾಯದೆಯಲ್ಲಿ ತಿದ್ದುಪಡೆಯನ್ನು ಮಾಡಿ ರೂಪಾಯಿಗೂ ಬ್ರಿಟನ್ನದ ಸ್ಟರ್ಲಿಂಗಕ್ಕೂ ಕಟ್ಟಿದ ಕಾಳೆಯನ್ನು ಹರಿದೊಗೆದು ರೂಪಾಯಿಯನ್ನು ಸ್ವತಂತ್ರ ನಾಣ್ಯವನ್ನು ಮಾಡಲಾಯಿತು. ನಮ್ಮ ದೇಶದ ನಾಣ್ಯಪದ್ಧತಿಯನ್ನು ನಿರ್ಧರಿಸುವದು ಮತ್ತು ಅದಕ್ಕೆಷ್ಟು ಬೆಲೆಯಿರಬೇಕೆಂಬುದನ್ನು ಗೊತ್ತುಮಾಡುವದು ಈವರೆಗೆ ಬ್ರಿಟಿಶ ಸರಕಾರದ ಕೈಯಲ್ಲಿತ್ತು. ನಮ್ಮಲ್ಲಿಯ ರೂಪಾಯಿಗಳನ್ನು ಪರದೇಶಗಳಿಗೆ ಕಳಿಸಿ ಅಥವಾ ಪರದೇಶದ ನಾಣ್ಯಗಳ ರೂಪದಿಂದ ಮುರಿಸಿ ಪರದೇಶದ ಸರಕುಗಳನ್ನು ತರಿಸಿಕೊಳ್ಳುವದು ನಮಗೆ ಸಾಧ್ಯವಿದ್ದಿಲ್ಲ. ನಮ್ಮ ರೂಪಾಯಿಗಳನ್ನು ಕೊಟ್ಟು ಬ್ರಿಟನ್ನದ ಪೌಂಡುಗಳನ್ನು ಅಥವಾ ಸ್ಟರ್ಲಿಂಗುಗಳನ್ನು ಕೊಂಡುಕೊಳ್ಳಬೇಕು. ಆ ಮೇಲೆ ಅವುಗಳನ್ನು ಪರದೇಶಕ್ಕೆ ಕಳಿಸಿ ನಮ್ಮ ವ್ಯವಹಾರವನ್ನು ಮಾಡಿಕೊಳ್ಳಬೇಕು. ಈ ದ್ರಾವಿಡ ಪ್ರಾಣಾಯಾಮದಿಂದ ನಮ್ಮ ದೇಶಕ್ಕೆ ಹಾನಿಯಾಗುತ್ತಿತ್ತು. ಬ್ರಿಟಿಶ್ ನಾಣ್ಯಕ್ಕೂ ನಮ್ಮ ರೂಪಾಯಿಗೂ ಬಹು ದಿವಸಗಳಿಂದ ಗಂಟು ಹಾಕಿದ್ದರು. ಅದ್ದರಿಂದಲೇ ಒಂದು ರೂಪಾಯಿಗೆ ಎಷ್ಟು ಪೇನ್ಸ ಕೊಡಬೇಕೆಂಬದರ ಬಗ್ಗೆ ದೊಡ್ಡ ವಾದವಿವಾದವು ನಡೆಯಿತು. ಪ್ರತಿಯೊಂದು ರಾಷ್ಟ್ರವು ತನ್ನ ನಾಣ್ಯವನ್ನು ಬಂಗಾರದ ಬೆಲೆಯಿಂದ ಅಳೆಯುತ್ತಿರುವದು. ೧೯೩೧ ನೇ ಇಸ್ವಿಯಲ್ಲಿ ಬ್ರಿಟನ್ನವು ಈ ಬಂಗಾರ ಮಾಪನ ಪದ್ಧತಿಯನ್ನು ಬಿಟ್ಟುಬಿಟ್ಟಿತು, ನಮ್ಮ ರೂಪಾಯಿಗೂ ಬ್ರಿಟನ್ನದ ಸ್ಟರ್ಲಿಂಗಕ್ಕೂ ಸಂಬಂಧವಿದ್ದದರಿಂದ ಆಗ್ಗೆ ಬಂಗಾರದ ಧಾರಣೆಯು ಒಮ್ಮೆಲೆ ಹೆಚ್ಚಾಯಿತು. ಅಂದಿನಿಂದ ಈ ಹೊತ್ತಿನ ವರೆಗೆ ಬಂಗಾರದ ಬೆಲೆಯು ಏರುತ್ತ ನಡೆದಿರುತ್ತದೆ. ಅಂದರೆ ರೂಪಾಯಿಗಳು ಅಗ್ಗವಾದವು. ರೂಪಾಯಿಗೆ ಪರದೇಶದಲ್ಲಿ ಮೊದಲಿನಷ್ಟು ಬೆಲೆಯಿರಲಿಲ್ಲ. ಅದ್ದರಿಂದ ಪರದೇಶದಿಂದ ಬರುವ ಸರಕುಗಳ ಬೆಲೆಯು ಹೆಚ್ಚಾಯಿತು. ಬ್ರಿಟನ್ನದ ಸ್ಟರ್ಲಿಂಗ ಅಂದರೆ ಅವೇನು ಭಂಗಾರದ ನಾಣ್ಯಗಳಲ್ಲ ನಮ್ಮಲ್ಲಿಯ ಕಾಗದ ನೋಟುಗಳಿದ್ದಂತಿರುತ್ತವೆ. ಜಗತ್ತಿನ ವ್ಯವಹಾರವೆಲ್ಲ ಸದ್ಯಕ್ಕೆ ನ್ಯೂಯಾರ್ಕದಲ್ಲಿ ಕೇಂದ್ರೀಕೃತವಾದ್ದರಿಂದ ಪ್ರತಿಯೊಂದು ನಾಣ್ಯವನ್ನು ಡಾಲರ ರೂಪದಲ್ಲಿ ವರ್ಣಿಸಬೇಕಾಗುತ್ತಿತ್ತು. ಹಿಂದುಸ್ತಾನದಿಂದ ಸರಕುಗಳು ಯಾವದಾದರೊಂದು ದೇಶಕ್ಕೆ ಬೇಕಾದರೆ ಅವರು ಕೂಡ ಬ್ರಿಟನ್ನದ ನಾಣ್ಯಗಳನ್ನು ಕೊಂಡು ರೂಪಾಯಿಗಳನ್ನು ಹಿಂದುಸ್ತಾನಕ್ಕೆ ಸಲ್ಲಿಸಬೇಕಾಗಿತ್ತು. ಇನ್ನು ಮುಂದೆ ಹಿಂದುಸ್ತಾನವು ಪರದೇಶಗಳಗೂಡ ಪ್ರತ್ಯಕ್ಷ ವ್ಯವಹಾರ ಮಾಡಬಲ್ಲದು. ಆದರೆ ಅದಕ್ಕಾಗಿ ಹಿಂದುಸ್ತಾನವು ಬಂಗಾರದ ದೊಡ್ಡ ನಿಧಿಯನ್ನು ಇಲ್ಲಿ ಸಂಗ್ರಹಿಸ ಬೇಕಾಗುತ್ತದೆ. ನಾಣ್ಯಪದ್ಧತಿಯ ಸ್ವತಂತ್ರ ಆಡಳಿತೆಯನ್ನು ಹಿಂದುಸ್ತಾನ ಸರಕಾರವು ಕೈವಶ ಪಡಿಸಿಕೊಂಡದ್ದು ಯೋಗ್ಯವಿದ್ದರೂ ಹೊಣೆಗಾರಿಕೆಯು ದೊಡ್ಡದಿರುತ್ತದೆ. ರೂಪಾಯಿಯ ಬೆಲೆಯು ಕಡಿಮೆಯಾದ್ದರಿಂದಲೇ ಬಂಗಾರವು ಬಹು ದೊಡ್ಡ ಪ್ರಮಾಣದಿಂದ ಪರದೇಶಕ್ಕೆ ಹೋಯಿತು. ಆ ಬಂಗಾರವು ನಮ್ಮ ದೇಶದಲ್ಲಿ ಈ ವರೆಗೆ ಉಳಿದಿದ್ದರೆ ಈಗ ಪುನಃ ಬಂಗಾರದ ಸಂಗ್ರಹವನ್ನು ಮಾಡುವ ಪ್ರಸಂಗ ಬರುತ್ತಿರಲಿಲ್ಲ. ಈ ಸುಧಾರಣೆಯಿಂದ ಒಮ್ಮೆಲೆ ಹಿಂದುಸ್ತಾನಕ್ಕೆ ಬಹಳ ಲಾಭವಾಗುತ್ತದೆಂದು ಹೇಳಲಾಗುವದಿಲ್ಲ. ಬರುವ ೩—೪ ವರ್ಷಗಳ ವರೆಗೆ ಕಿಂಚಿತ್ ತೊಂದರೆಯಾಗಬಹುದು. ಯಾಕೆಂದರೆ ನಾವು ಪರದೇಶಕ್ಕೆ ಕಳಿಸತಕ್ಕ ಸರಕು ನಮ್ಮಲ್ಲಿ ಕಡಿಮೆಯಿರುತ್ತದೆ. ಜಗತ್ತಿನ ಎಲ್ಲರಾಷ್ಟ್ರಗಳು ಒಂದೆಡೆ ಸೇರಿ ಒಂದು ನಾಣ್ಯಪದ್ಧತಿಯಲ್ಲಿ ಯಾವ ರೀತಿಯಿಂದ ಅವ್ಯವಸ್ಥೆಯಾಗದಂತೆ ಒಂದು ಸಾಧಾರಣ ನಿಧಿಯನ್ನು ನಿರ್ಮಿಸಿದ್ದಾರೆ. ಅದರಮುಖಾಂತರ ಹಿಂದುಸ್ತಾನವು ಕೂಡ ಹಾನಿಯಾಗದಂತೆ ತನ್ನ ವ್ಯವಹಾರವನ್ನು ನಡೆಸಿಕೊಳ್ಳಬಹುದು. ಕಳೆದ ಮಹಾಯುದ್ಧದಲ್ಲಿ ನಮ್ಮ ದೇಶಕ್ಕಾದ ಲಾಭವು ನಮ್ಮ ಕೈತಪ್ಪಿ ಹೋಗದಂತೆ ಮಾಡಿಕೊಳ್ಳಬಹುದು. ಕೇಂದ್ರ ಸರಕಾರದ ಸೂತ್ರಗಳು ನಮ್ಮ ಜನರ ಕೈಸೇರಿದ್ದರಿಂದ ಅನೇಕ ಬಗೆಯ ಸುಧಾರಣೆಗಳನ್ನು ಮಾಡಿಕೊಳ್ಳಲು ಸಾಧ್ಯವಾಯಿತು. ಪರದೇಶದ ನಾಣ್ಯಗಳ ವಿನಿಮಯವನ್ನು ಒದಗಿಸಿಕೊಡುವಂತಹ ಈಗಿದ್ದ ಬ್ಯಾಂಕುಗಳೆಲ್ಲ ಪರಕೀಯವಿರುತ್ತವೆ. ನಾವು ಯಾವದೊಂದು ಪರದೇಶಕ್ಕೆ ಹಣವನ್ನು ಕಳಿಸಬೇಕೆಂದರೆ ಪರಕೀಯರ ಮೊರೆಹೋಗಬೇಕಾಗುತ್ತದೆ. ಇಲ್ಲಿಯ ಬ್ಯಾಂಕುಗಳೆ ಆ ವ್ಯವಹಾರವನ್ನು ಕೈಕೊಳ್ಳಲು ಸರಕಾರದವರು ಅವಕಾಶ ಕಲ್ಪಿಸಿಕೊಡಬೇಕು.

# ಅಂತರರಾಷ್ಟ್ರೀಯ

## ಸಾಮ್ಯವಾದಿಗಳ ಸಾಹಸ

ಒಳ್ಳೆ ಕೌತುಕ ಪ್ರದವಾದ ಪುಸ್ತಿಕೆಯೊಂದು ಲಂಡನ್ನಿನಲ್ಲಿ ಹಂಚಲ್ಪಟ್ಟಿದೆ. "ಸಾಮ್ಯವಾದಿ ಸರಕಾರದ ಕಾರ್ಯಗಳು— ಪೂರ್ಣ ವರದಿ" ಎಂದು ಮುಖ ಪುಟದಲ್ಲಿ ಸುಂದರವಾಗಿ ಮುದ್ರಿಸಲ್ಪಟ್ಟ ಈ ಪುಸ್ತಿಕೆಯನ್ನು ತೆರೆದರೆ ಒಳಗಿನ ಪುಟಗಳೆಲ್ಲ ಬರಿದೋ ಬರಿದು. ಬ್ರಿಟಿಶ ಕೂಲಿಕಾರ ಸರಕಾರ ಸಾಧಿಸಿದ ಕಾರ್ಯಗಳ ಬಗ್ಗೆ ಇದೊಳ್ಳೆ ವ್ಯಂಗ್ಯ— ಚುಚ್ಚುವ— ಟೀಕೆಯೆ ಸರಿ. ಅದರಲ್ಲಿರುವ ವೈಚಿತ್ರ್ಯವೆಂದರೆ, ಸಾಮ್ಯವಾದಿ ಸರಕಾರ ಸಾಧಿಸಿದ್ದರ ಬಗ್ಗೆ ವಿರೋಧಿ ಪಕ್ಷದವರ ಭಾವನೆಗಳಂತೆ ಕೂಲಿಕಾರ ಪಕ್ಷದ ಬೆಂಬಲಿಗರವೂ ಆಗತೊಡಗಿದ್ದು. ಸಾಮ್ಯವಾದಿ ಸರಕಾರ ನಿಜವಾಗಿ ದುರ್ದೈವಿ. ಜಾಗತಿಕ ಪರಿಸ್ಥಿತಿಯು ಹಲಕೆಲವು ಒತ್ತಡಗಳು ಮಾತ್ರ ಸಾಲದ್ದಕ್ಕೆ ಪ್ರಕೃತಿ ಪ್ರಕೋಪವೂ ಅವರ ಮೇಲೆರಗಿ ಪ್ರಗತಿಯನ್ನು ಕುಂಠಿತಗೊಳಿಸಿದೆ! ಆದರೆ ಆರು ವರ್ಷದ ತೀವ್ರತರ ತ್ಯಾಗದಿಂದ ಬಳಲಿ ಬಸವಳಿದ ಜನತೆ ಈ ನೆವಗಳನ್ನು ತಲೆಯಲ್ಲಿ ಹಾಕಿಕೊಳ್ಳುವದಿಲ್ಲ. ತೀವ್ರ ಅತೃಪ್ತಿಯನ್ನು ವ್ಯಕ್ತಗೊಳಿಸುವ ಹಲವು ಘಟನೆಗಳು ಕಳೆದ ವಾರ ಜರಗಿದವು:

※ ಈಸ್ಟರ ವಾರದಲ್ಲಿ ಸೇರಿದ ಟ್ರೇಡ ಯೂನಿಯನ್ ಸಭೆಗಳು ಬೆವಿನ್ನರ ವಿದೇಶ ಧೋರಣದ ಬಗ್ಗೆ ತೀವ್ರ ನಿಷೇಧವನ್ನು ವ್ಯಕ್ತಗೊಳಿಸಿವೆ.

※ ಈಚೆಗೆ ಜಿಲ್ಹಾ ಸಮಿತಿಗಳ ಚುನಾವಣೆ ನಡೆದಾಗ ಕೂಲಿಕಾರ ಪಕ್ಷದ ಹಲವು ಸ್ಥಾನಗಳು ಕಳೆದು ಹೋದವು.

※ ಎಲ್ಲಕ್ಕಿಂತ ಹೆಚ್ಚಾಗಿ ಈ ತಿಂಗಳ ಆರಂಭದಲ್ಲಿ ಸರಕಾರದವರು ಮುಂಡಿಸಿದ ಶಾಂತಿ ಕಾಲದ ಸಾರ್ವತ್ರಿಕ ಸೈನ್ಯ ಭರತಿಯ ಮಸೂದೆಗೆ ಸರಕಾರ ಪಕ್ಷದ ಅನೇಕ ಸದಸ್ಯರು ವಿರೋಧ ಮತವಿತ್ತರು. ಎಷ್ಟರ ವರೆಗೆಂದರೆ ಕಾನ್ಸರ್ವೇಟಿವ ಪಕ್ಷದವರು ಸರಕಾರಕ್ಕೆ ಬೆಂಬಲ ಕೊಡದೆ ಹೋಗಿದ್ದರೆ ಅದು ತಲೆಕೆಳಗಾಗುವ ಸಂಭವವಿತ್ತು.

## ರಶಿಯಾ ವಿರುದ್ಧ ಯುದ್ಧ?

ಈ ಸಾರ್ವತ್ರಿಕ ಸೈನ್ಯ ಭರತಿಗೆ ವಿರೋಧ ಕೂಲಿಕಾರ ಪಕ್ಷದಲ್ಲಿ ಹಲವಾರಗಳಿಂದ ಇತ್ತು. (ಕರ್ಮವೀರ, ೭—೪—೪೭) ಪಾರ್ಲಮೆಂಟಿನಲ್ಲಿ ಅದು ಮತಕ್ಕೆ ಬಿದ್ದಾಗ ಸಿಕ್ಕಿದ್ದ ಅನುಕೂಲ ೩೮೬ ಮತಗಳಲ್ಲಿ ೧೪೭ ಕೂಲಿಕಾರರಲ್ಲದ ಸದಸ್ಯರಿಂದ ಬಂದವು. ಕಾನ್ಸರ್ವೇಟಿವರೂ ಲಿಬರಲ್ಲರೂ ಇತರರೂ ಅದನ್ನು ವಿರೋಧಿಸಿದ್ದರೆ ಸರಕಾರ ಬರಿ ೯ ಮತಗಳಿಂದ ಗೆಲ್ಲುತ್ತಿತ್ತು. ಕಾನ್ಸರ್ವೇಟಿವರಲ್ಲಿ ಎಲ್ಲರೂ ಮತವೀಯಲಿಲ್ಲ. ಅವರೆಲ್ಲರೂ ಬಂದು ಸರಕಾರವನ್ನೆದುರಿಸಿದ್ದರೆ ಸರಕಾರ ಉರುಳಿ ಹೋಗುತಿತ್ತು.

ಈ ಮಸೂದೆಯ ಚರ್ಚೆ ನಡೆದಾಗ ಕೂಲಿಕಾರ ಪಕ್ಷದಲ್ಲಿನ ಬಂಡುಗಾರ ಗುಂಪಿನ ಮುಂದಾಳಾದ ಝಿಲಿಯಾಕಸರು ಒಂದು ಆಶ್ವಾಸನವನ್ನು ಸರಕಾರದಿಂದ ಬೇಡಿದರು. ಮುಂದಿನ ೧೦ ವರ್ಷಗಳಲ್ಲಿ ಬ್ರಿಟನ್ನು ರಶಿಯಾದಗೂಡ ಯುದ್ಧ ಹೂಡುವ ಸಂಭವವಿಲ್ಲವೆಂಬ ದೃಷ್ಟಿಯಿಂದಲೇ ಸಂರಕ್ಷಣ ಖಾತೆ ತನ್ನ ಅಂದಾಜುಗಳನ್ನು ಸಿದ್ಧಗೊಳಿಸುವದೆಂಬ ಭರವಸೆ ಅವರಿಗೆ ಬೇಕಾಗಿತ್ತು.

ಆದರೆ ಮಂತ್ರಿ ಎ. ವಿ. ಅಲೆಗ್ಝಾಂಡರರು ಹೇಳಿದರು: "ನನ್ನ ಮಟ್ಟಿಗೆ ನಾನಂತೂ ಇಂಥ ಭರವಸೆ ಕೊಡಲಾರೆ. ಸದ್ಯಕ್ಕೆ ಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ರೂಪುಗೊಳ್ಳುತ್ತಿರುವ ಘಟನೆಗಳ ಹಾಗು ಬೇರೆ ಮಾತುಕತೆಗಳ ಪರಿಣಾಮ ತಿಳಿಯುವ ವರೆಗೆ ಸೇನಾಪತಿ ಮಂಡಲದ ನಾಯಕರಿಗೆ ಇಂಥ ನಿರ್ದೇಶವನ್ನು ಕೊಡುವದು ಸಾಧ್ಯವಿಲ್ಲ."

ಅದರ ಅರ್ಥ ಸ್ಪಷ್ಟವೇ ಇದೆ. ರಶಿಯಾದೊಡನೆ ಇನ್ನು ಹತ್ತು ವರ್ಷಗಳಲ್ಲಿ ಬ್ರಿಟನ್ನು ಯುದ್ಧ ಹೂಡಲಿಕ್ಕಿಲ್ಲವೆಂದು ಹೇಳಬಾರದು. ಬೆವಿನ್ನರ ವಿದೇಶ ಧೋರಣೆಯ ಅಪರಿಹಾರ್ಯ ಫಲವಾಗಿ ರಶಿಯಾದೊಡನೆ ತಿಕ್ಕಾಟವಾಗುವ ಸಂಭಾವ್ಯತೆಯನ್ನೆ ಇದು ತೋರಿಸುತ್ತದೆ. ರಾಯಭಾರಿ ಅಸಫ ಅಲ್ಲಿಯವರ ಸತ್ಕಾರ ಸಮಾರಂಭದಲ್ಲಿ ಕೆಲ ವಾರ ಕೆಳಗೆ ವಿದೇಶ ಮಂತ್ರಿ ಬೆವಿನ್ನರು ಹಿಂದುಸ್ತಾನಕ್ಕೆ ರಶಿಯಾದಗೂಡ ಸೇರಬೇಡಿರಿ ಎಂಬರ್ಥದ ಉಪದೇಶ ಕೊಟ್ಟಿದ್ದರು. ಕೂಲಿಕಾರ ಪಕ್ಷದ ಬಂಡುಗಾರ ಸದಸ್ಯರಿಗೆ ಇದೀಗ ಬೇಡವಾಗಿದೆ. ಅವರು ದಿನಹೋದಂತೆ ಪ್ರಬಲವಾಗಿ ಸಂಘಟಿತರಾಗುತಿರುವದರಿಂದ ಈ ಎರಡನೆ ಬಹಿರಂಗ ಬಂಡಾಯದ ನಂತರವೂ ಮುಖ್ಯ ಮಂತ್ರಿ ಅಟ್ಲಿಯವರು ಅವರ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲಿಲ್ಲ. ಬದಲಿಗೆ ಪಾರ್ಲಮೆಂಟನ್ನು ವಿಸರ್ಜಿಸಿ ಹೊಸ ಚುನಾವಣೆಗಳನ್ನು ನಡೆಸುವ ಭಯ ಪ್ರದರ್ಶನವನ್ನು ಅವರು ತಮ್ಮ ಪಕ್ಷದ ಸಭೆಯಲ್ಲಿ ಹಾಕಿದ್ದಾರಂತೆ.

ಇದಲ್ಲದೆ ಸರಕಾರದ ಧೋರಣೆಯ ಬಗ್ಗೆ ಮಂತ್ರಿಗಳಲ್ಲೆ ಅನೇಕರು ಅಸಂತುಷ್ಟರಾಗಿದ್ದು ಕನಿಷ್ಠ ಒಬ್ಬ ಮಂತ್ರಿಯಾದರೂ ರಾಜೀನಾಮೆ ಕೊಡಬಹುದೆಂಬ ಸಂಶಯವುಂಟಾಗಿದೆ.

ಪ್ರಮುಖ ಕೂಲಿಕಾರ ಮುಂದಾಳೊಬ್ಬನು, ಈ ಬಾರಿ ಇಂಗ್ಲಂಡಿನಲ್ಲಿ ಸಾಮ್ಯವಾದ ಸೋತರೆ, ವೈಯಕ್ತಿಕ ಬಂಡವಳವಾದಕ್ಕಿಂತಲೂ ಕೆಡುಕಾದುದು ತಲೆಯೆತ್ತುವದೆಂದು ಕೊಟ್ಟ ಎಚ್ಚರಿಕೆ ಸತ್ಯವಾಗಬಹುದು. ಆ "ಕೆಡುಕು" ಎಂದರೆ, ಫ್ಯಾಸಿಝಂ ಎಂಬುದು ನಿಚ್ಚಳ. ಇಂಗ್ಲಂಡು ಅಮೇರಿಕನ್ ಬಂಡವಳಗಾರಿಕೆಯು ಇಲ್ಲದೆ ರಶಿಯನ್ ಕಮ್ಯುನಿಜಂದ ಬಾಲವಾಗಬೇಕಾಗುವದೆಂದೂ ಅವನು ಜನರಿಗೆ ಎಚ್ಚರವಿತ್ತಿದ್ದಾನೆ.

## ಡಿಗಾಲೆಯ ಪುನವರತಾರ

ಫ್ರೆಂಚ ರಾಜಕಾರಣಿಗಳಲ್ಲಿ ಸಾಮ್ಯವಾದಿಗಳ ಪ್ರಭಾವ ಹೆಚ್ಚಾಗಿದ್ದರೂ ಅವರ ವಿವಿಧ ಬಣಗಳಲ್ಲಿರುವ ಅನೈಕ್ಯ ಪ್ರತಿಗಾಮಿಗಳಿಗೆ ಪುನಃ ಪ್ರವೇಶದ್ವಾರ ಸಿದ್ಧಮಾಡಿಕೊಟ್ಟಿದೆ. ಸಾಮ್ಯವಾದಿಗಳೂ ಕಮ್ಯುನಿಸ್ಟರೂ ಇಂಡೋಚೀನದ ಧೋರಣದ ಬಗ್ಗೆ ಹೋರಾಡುತಿರುವಾಗ ಫ್ರಾನ್ಸಿನ ಚರ್ಚಿಲ್ಲನೆಂದು ಹೇಳಿಸಿಕೊಳ್ಳಬಹುದಾದ ಯುದ್ಧನಾಯಕ ಡಿಗಾಲೆ ಪುನಃ ರಾಜಕಾರಣದಲ್ಲಿ ಅವತರಿಸಿದ್ದಾನೆ. ಕೆಲ ತಿಂಗಳ ಹಿಂದೆ ರಾಜಕಾರಣದಿಂದ ಅವನು ನಿವೃತ್ತನಾದನು ಬರಿ ಸಮಯ ಕಾಯುತ್ತ ಕುಳಿತಿದ್ದನೆಂದು ತೋರುತ್ತದೆ. ಈಗ ಅವನು ಮಾಡುತಿರುವನು ಅಧಿಕಾರ ಗ್ರಹಣದ ಕೊನೆಯ ಪ್ರಯತ್ನವಾಗಿರಬಹುದು. ಬ್ರೂನಿವಲ್ಲಿನಲ್ಲಿ. ಈ ತಿಂಗಳ ಆರಂಭದಲ್ಲಿ ಸರಕಾರದ ಮೇಲೆ ಕಟುತರವಾದ ಟೀಕೆಯನ್ನು ಮಾಡಿದನು. ಮತ್ತೆ ಮೊನ್ನೆ ಸೋಮವಾರ ಅದೇ ರೀತಿ ಭಾಷಣ ಮಾಡಿದ್ದಾನೆ. ಅವನ "ಸರ್ವಾಧಿಕಾರಿ ಮನೋವೃತ್ತಿ"ಯ ವಿರುದ್ಧ ಕಮ್ಯುನಿಸ್ಟರೇ ಮೊದಲಾದ ಬೇರೆ ಬೇರೆ ರಾಜಕೀಯ ಪಂಥಗಳು ಪ್ರದರ್ಶನ ಮಾಡಿದವು. ಸರಕಾರದ ಅಧಿಕಾರದಲ್ಲಿರುವವರೂ ಸೈನ್ಯಾಧಿಕಾರಿಗಳೂ ಡಿಗಾಲೆಯಿಂದ ಸಂಘಟಿತವಾದ ಸರಕಾರದ ವಿರುದ್ಧ ಪ್ರದರ್ಶನಗಳಲ್ಲಿ ಭಾಗವಹಿಸಿದ್ದು—ಅದೂ ವಿದೇಶ ರಾಯಭಾರಿಗಳ ಮುಂದೆ—ಸರಕಾರದ ಘನತೆಗೆ ಕುಂದೆಂದು ಟೀಕಿಸಲಾಗಿದೆ. ಡಿಗಾಲೆಗೆ ಸೈನ್ಯದಲ್ಲಿ ಸಾಕಷ್ಟು ಪ್ರಭಾವವಿದೆ. ಫ್ರೆಂಚ ಸಾಮ್ಯವಾದಿ ಕಮ್ಯುನಿಸ್ಟರು ದೇಶವನ್ನು ಕಂಟಕದಿಂದ ಪಾರುಮಾಡಲಾರದೆ ಹೋದರೆ ಅಗ ಸೈನ್ಯದ ಮೂಲಕ ಡಿಗಾಲೆ ಅಧಿಕಾರ ಗ್ರಹಣ ಮಾಡಬಹುದೆಂಬ ಭಯವುಂಟು. ಅಗ ಯುರೋಪಿನಲ್ಲಿ ಇನ್ನೊಬ್ಬ ಸರ್ವಾಧಿಕಾರಿಯ ಉದಯವಾದಂತಾಗುವದು.

## ಜಾರ್ಜನ ಮರಣ

ಗ್ರೀಸ ದೇಶದ ಎರಡನೆ ಜಾರ್ಜ ಅರಸ ಕೆಲವೇ ತಿಂಗಳ ರಾಜ್ಯಭಾರದ ನಂತರ ಎಪ್ರಿಲ ೧ ಕ್ಕೆ ಅನಂತ ಧಾಮವನ್ನು ಸೇರಿದನು. ಅವನ ಸ್ಥಾನದಲ್ಲಿ ಯುವರಾಜ ಪಾವುಲನನ್ನು ರಾಜನೆಂದು ಘೋಷಿಸಲಾಗಿದೆ.

ಎರಡನೆ ಜಾರ್ಜನ ಜೀವನ ಮತ್ತು ರಾಜ್ಯಭಾರ ಹಲವಾರು ಕುತ್ತುಗಳಿಂದ ತುಂಬಿತ್ತು. ಅರಸನಾಗಿ ಆಳಿದ್ದಕ್ಕಿಂತ ಹೆಚ್ಚು ಕಾಲ ದೇಶಭ್ರಷ್ಟನಾಗಿ ಅಲೆಯುವದು ಅವನ ಪಾಲಿಗೆ ಬಂದಿತ್ತು. ಕೊನೆಯ ಬಾರಿ ಮೊನ್ನೆ ಸಪ್ಟೆಂಬರದಲ್ಲಿ ಅವನು ಗ್ರೀಸದಲ್ಲಿ ನಡೆದ ಮತಗಣನೆಯ ನಂತರ ಪಟ್ಟವನ್ನೇರಿದ್ದನು.

ಎರಡನೆಯ ಜಾರ್ಜನು ಇಂಗ್ಲಂಡಿನ ವಿಕ್ಟೋರಿಯಾ ರಾಣಿಯ ಮರಿಮಗ. ೧೯೨೨ ರಲ್ಲಿ ಅವನ ತಂದೆ ಗ್ರೀಕ ರಾಜಪದವನ್ನು ತ್ಯಾಗಮಾಡಿದಾಗ ಜಾರ್ಜನು ಪಟ್ಟವನ್ನೇರಿದನು. ಆದಕ್ಕೂ ಮೊದಲು ೧೯೧೭ ರಲ್ಲಿ ಅವನನ್ನು ತಿರಸ್ಕರಿಸಿ ಅವನ ತಮ್ಮನನ್ನು ಪಟ್ಟಕ್ಕೇರಿಸಲಾಗಿತ್ತು. ರಶಿಯನ್ ಸೈನ್ಯದಲ್ಲಿ ಅವನು ಕೆಲಸ ಮಾಡಿದ್ದರಿಂದ ರಾಜ್ಯಪದಕ್ಕೆ ಅಯೋಗ್ಯನೆಂಬ ಕಾರಣದಿಂದ.

೧೯೨೨ ರಲ್ಲಿ ಪದಾರೂಢನಾದವನು ಒಂದೇ ವರ್ಷದಲ್ಲಿ ಪದತ್ಯಾಗ ಮಾಡಬೇಕಾಯಿತು. ೧೯೩೫ ರಲ್ಲಿ ಜ. ಮೆಟಾಕ್ಸಾಸನ ಬಲಪಕ್ಷದ ಬಂಡಾಯ ವ್ಯರ್ಥವಾದನಂತರ ಜಾರ್ಜನು ದೇಶ ಭ್ರಷ್ಟನಾದನು. ೧೯೩೫ ರಲ್ಲಿ ತಿರುಗಿ ಅವನನ್ನು ಜನರು ಕರೆತಂದು ಪಟ್ಟಕ್ಕೇರಿಸಿದರು.

ಆದರೆ ಮತ್ತಾರು ವರ್ಷದಲ್ಲಿ ಜರ್ಮನರ ದಾಳಿ ಬಂದುದರಿಂದ ಅವನು ಕ್ರೀಟಕ್ಕೆ ಪಾರಾದ. ಅಲ್ಲಿಂದ ಇಜಿಪ್ತಕ್ಕೂ ಆ ಮೇಲೆ ಇಂಗ್ಲಂಡಿಗೂ ಹೋದನು. ಎರಡೂ ಬಾರಿ ಅವನ ನಿರ್ವಾಸನದ ಅವಧಿ ಇಂಗ್ಲಂಡಿನಲ್ಲೆ ಹೆಚ್ಚಾಗಿ ಕಳೆದಿತ್ತು.

※ ಹೊಸ ಅರಸನಾದ ಪಾವುಲನಾದರೂ ಹೆಚ್ಚು ಸುದೈವಿಯಾಗುವಂತೆ ಕಾಣುವದಿಲ್ಲ. ಎಡ ಪಕ್ಷಗಳು ಸೇರಿ ಪುನಃ ಸಾರ್ವತ್ರಿಕ ಚುನಾವಣೆಗಳಾಗಬೇಕೆಂದೂ ಜನರು ಜಾರ್ಜನನ್ನಷ್ಟೆ ಸ್ವೀಕರಿಸಿದ್ದರು ಹೊರತು ಪಾವುಲನನ್ನಲ್ಲ ಎಂದೂ ಕೂಗೆಬ್ಬಿಸಿದ್ದಾರೆ. ಪಾವುಲನ ಹೆಂಡತಿ ಜರ್ಮನ್ ರಾಜಕುಟುಂಬದವಳಿದ್ದು ಅವಳು ಜರ್ಮನ್ ಪಕ್ಷಪಾತಿಯಿದ್ದಳೆಂದು ಆರೋಪಿಸಲಾಗಿತ್ತು. ಅಲ್ಲದೆ ಪಾವುಲನು ಮೆಟಕ್ಸಾಸನ ಸರ್ವಾಧಿಕಾರದ ಕಾಲದಲ್ಲಿ ಸರ್ವಾಧಿಕಾರಿ ಪದ್ಧತಿಯ ಯುವಕ ಚಳವಳಿಯನ್ನು ಸಂಘಟಿಸಲು ಪ್ರಯತ್ನಿಸಿದನೆಂದು ನೆನೆಸಿಕೊಳ್ಳಲಾಗಿದೆ.

※ ಉತ್ತರ ಗ್ರೀಸದಲ್ಲಿ ಕೂಟಯೋಧರ ಹಾವಳಿ ಕಡಿಮೆಯಾಗುವ ಬದಲು ಹೆಚ್ಚಾಗುತಿದೆ. ಈ ಹಾವಳಿಯಲ್ಲಿ ನೆರೆಹೊರೆಯ ರಾಜ್ಯಗಳ ಕೈಯೆಷ್ಟಿದೆಯೆಂಬ ಬಗ್ಗೆ ಯುಕ್ತ ರಾಷ್ಟ್ರ ವಿಚಾರಣಾ ಸಮಿತಿ ಮಾಡಲಿರುವ ವರದಿಯೂ ಇನ್ನೂ ಸಿದ್ಧವಾಗಿಲ್ಲ. ಕೂಟಯೋಧರು ಈಗ ಉತ್ತರ ಗ್ರೀಸದಲ್ಲಿ ತಮ್ಮದೇ ಸರಕಾರ ಸ್ಥಾಪಿಸಿಕೊಳ್ಳ ಹೊರಟಂತೆ ಕಾಣುತ್ತದೆ. ಈ ಗಂಡಾಂತರವನ್ನು ಅನುಲಕ್ಷಿಸಿ ಅವರನ್ನು ಪೂರ್ತಿ ಹಣ್ಣು ಮಾಡುವ ವರೆಗೆ ಗ್ರೀಸಿಗೆ ಹೋದ ಬ್ರಿಟಿಶ ಸೈನ್ಯ—ಶಿಷ್ಟಮಂಡಲ ಅಲ್ಲೆ ಉಳಿಯುವದೆಂದು ನಿರ್ಣಯಿಸಲಾಗಿದೆ!

## ಉಚಿತ ಧಿಕ್ಕಾರ

ಪ್ರಬಲ ರಾಷ್ಟ್ರಗಳ ಅಧಿಕಾರ ಮದವನ್ನು ಕುರಿತು ಇಜಿಪ್ತದಲ್ಲಿ ಸೇರಿದ ಪಾರ್ಲಮೆಂಟುಗಳ ಪರಿಷತ್ತಿನಲ್ಲಿ ಇಜಿಪ್ತದ ಸಿನೇಟಿನ ಅಧ್ಯಕ್ಷರಾದ ಹೈಕೆಲ ಪಾಶಾರು ಕೆಲವು ಸಕಾಲವೂ ಸಮುಚಿತವೂ ಆದ ಟೀಕೆಗಳನ್ನು ಮಾಡಿದರು. ಈ ಟೀಕೆ ಮಾಡುವಗೋಸ್ಕರ ಅವರು ಪರಿಷತ್ತಿನ ಅಧ್ಯಕ್ಷ ಸ್ಥಾನವನ್ನು ಬಿಟ್ಟು ಸ್ವಲ್ಪ ಹೊತ್ತು ಕೆಳಗಿಳಿದು ಮಾತಾಡಿದರು. ಪ್ರಬಲ ರಾಷ್ಟ್ರಗಳು ಜಗತ್ತಿನಲ್ಲಿ ತಮ್ಮ ಸರ್ವಾಧಿಕಾರವನ್ನು ಸ್ಥಾಪಿಸಲು ಪ್ರಯತ್ನಿಸುತಿವೆಯೆಂದು ಅವರು ಆರೋಪಿಸಿದರು. ತ್ರಿಮೂರ್ತಿಗಳು, ಅಥವಾ ಚತುರ್ಮೂರ್ತಿಗಳು ಇಲ್ಲವೆ ಪಂಚಮೂರ್ತಿಗಳು ಗುಪ್ತವಾಗಿ ಸಭೆ ಸೇರುತ್ತಾರೆ; ಚರ್ಚಿಸುತ್ತಾರೆ; ಮತ್ತು ಚಿಕ್ಕ ಚಿಕ್ಕ ಮಿತ್ರ ರಾಷ್ಟ್ರಗಳ ಹಣೆಬರಹವನ್ನೂ ಶತ್ರು ರಾಷ್ಟ್ರಗಳದನ್ನೂ ಯಾರನ್ನೂ ಕೇಳದೆ ತಾವೇ ತಾವಾಗಿ ನಿರ್ಣಯಿಸುತ್ತಾರೆ. ಈ ಗೋಲವ್ಯಾಪಿ ಸರ್ವಾಧಿಕಾರವನ್ನು ಎದುರಿಸಬೇಕಾಗಿದೆಯೆಂದು ಅವರು ಹೇಳಿದರು. ಆದರೆ ಮಾಸ್ಕೋದಲ್ಲಿ ನಾಲ್ಕು ವಾರಗಳಿಂದ ಎಳೆದಾಡಿ ಏನೂ ಪ್ರಗತಿ ಮಾಡಲಾರದೆ ಒದ್ದಾಡುತ್ತಿರುವ ಚತುರ್‌ರಾಷ್ಟ್ರ ವಿದೇಶ ಮಂತ್ರಿಗಳು ಇದನ್ನು ಕಿವಿಯ ಮೇಲೆ ಹಾಕಿಕೊಳ್ಳುವರೆ?

## ಹಿಂದೀಯರ ವಿರುದ್ಧ ಬಹಿಷ್ಕಾರ

ದಕ್ಷಿಣ ಆಫ್ರಿಕೆಯ ಯುರೋಪಿಯನ್ನರು ತಮ್ಮ ವರ್ಣದ್ವೇಷಕ್ಕೆ ಯುಕ್ತ ರಾಷ್ಟ್ರ ಸಂಸ್ಥೆಯ ಮನ್ನಣೆ ಸಿಗದಿದ್ದುದರಿಂದ ಸಂತಪ್ತರಾಗಿ ಅಲ್ಲಿಯ ಹಿಂದೀಯರ ಜೀವನವನ್ನು ಅಸಹನೀಯವಾಗಿ ಮಾಡಲು ಬೇಕಾದುದನ್ನೆಲ್ಲ ನಡೆಸತೊಡಗಿದ್ದಾರೆ. ಟ್ರಾನ್ಸವಾಲದಲ್ಲಿ ಎಳೆ ವಯಸ್ಸಿನ ಸ್ತ್ರೀ ಪುರುಷರು—ಬಹಳ ಮಾಡಿ ವಿದ್ಯಾರ್ಥಿಗಳು—ಹಿಂದೀ ವ್ಯಾಪಾರಿಗಳ ಅಂಗಡಿಗಳ ಮುಂದೆ ಪಹರೆ ನಡೆಸಿ ಯುರೋಪಿಯನ್ ಗಿರಾಕಿಗಳನ್ನು ವ್ಯಾಪಾರಕ್ಕೆ ಬಾರದಂತೆ ತಡೆಯುತ್ತ ಹಿಂದೀ ಬಹಿಷ್ಕಾರದ ಪ್ರಚಾರವನ್ನು ಆರಂಭಿಸಿದ್ದಾರೆ. ಇದಕ್ಕೆ ಜನರಲ್ ಸ್ಮಟ್ಸರ ಮೌನ ಸಮ್ಮತಿಯಿದ್ದಂತೆ ತೋರುತ್ತದೆ.

ದರ್ಬಾನದಲ್ಲಿ ಇಷ್ಟು ಸಂಘಟಿತ ಬಹಿಷ್ಕಾರ ಪ್ರಯತ್ನಗಳಿಲ್ಲದಿದ್ದರೂ ಅದರ ಸಂಕೇತಗಳು ತೋರುತ್ತಿವೆ.

ಟ್ರಾನ್ಸವಾಲ ಹಿಂದೀ ಕಾಂಗ್ರೆಸ್ಸು ಈ ಬಹಿಷ್ಕಾರ ಪ್ರಚಾರಕರ ಮೇಲೆ ನ್ಯಾಯ ಸ್ಥಾನದಲ್ಲಿ ಖಟ್ಲೆ ಹಾಕುವ ವಿಚಾರದಲ್ಲಿದೆ.

## ರಶಿಯಾ ವಿರುದ್ಧ ಅಮೇರಿಕಾ

ರಶಿಯಾದ ಮತ್ತು ಜಗತ್ತಿನಲ್ಲೆಲ್ಲ ಇರುವ ಕಮ್ಯುನಿಸ್ಟರ ವಿರುದ್ಧ ಅಮೇರಿಕೆಯ ಸಾರ್ವಜನಿಕಾಭಿಪ್ರಾಯವನ್ನು ತಿರುಗಿಸಲು ಪ್ರಚಂಡ ಪ್ರಯತ್ನಗಳು ನಡೆದಿವೆ. ಈ ಪ್ರಚಾರದಲ್ಲಿ ಸರಕಾರವೂ ಪತ್ರಿಕೆಗಳೂ ಮುಂದಾಳುಗಳೂ ವಿಕಪ್ರಕಾರವಾಗಿ ತೊಡಗಿದ್ದಾರೆ. ಗ್ರೀಸ್ ಮತ್ತು ತುರ್ಕಿಗೆ ರಶಿಯಾದ ವಿರುದ್ಧ ಮತ್ತು ಕಮ್ಯುನಿಸ್ಟರ ವಿರುದ್ಧ ಸಹಾಯ ನೀಡಲು ಸಿನೇಟ ಸಮಿತಿಯ ಮುಂದೆ ಸರಕಾರ ಮಂಡಿಸಿದ ಬೇಡಿಕೆಯ ಚರ್ಚೆ ನಡೆದಿದೆ. ಆ ಸಮಿತಿಯ ಮುಂದ ಸಾಕ್ಷ್ಯ ಹೇಳಿದವರು ರಶಿಯಾಕ್ಕೆ ಬೆದರಿಕೆ ಹಾಕುವ ಉದ್ದೇಶದಿಂದಲೇ ಮಾತಾಡಿದರು. ಅಮೇರಿಕನ್ ಕಮ್ಯುನಿಸ್ಟರ ಚಟುವಟಿಕೆಗಳ ಸಂಬಂಧದಲ್ಲಿ ವರದಿಯೊಂದು ಹೊರಬಿದ್ದಿದ್ದು ಅದರಲ್ಲಿ ಅಮೇರಿಕನ್ ಕಮ್ಯುನಿಸ್ಟರು ಮಾಸ್ಕೋದ ಪಂಚಮದಲದವರೆಂತಲೂ ಈಗ ಅಮೇರಿಕೆಯಲ್ಲಿ ಅವರ ಶಕ್ತಿ ಹಿಂದಿಗಿಂತ ಎಷ್ಟೋ ಬೆಳೆದಿದೆಯೆಂತಲೂ ಸರಕಾರದ ಅಧಿಕಾರಗಳಲ್ಲಿ, ಕೂಲಿಕಾರ ಚಳವಳಿಯಲ್ಲಿ ಎಲ್ಲೆಡೆಗಳಲ್ಲಿಯೂ ಅವರ ಚಂಚು ಪ್ರವೇಶವಾಗಿದೆಯೆಂತಲೂ ಅದು ಹೇಳಿದೆ. ಒಬ್ಬ ಕಾಂಗ್ರೆಸ ಸದಸ್ಯರಂತೂ ಸ್ಟಾಲಿನ್ನರಿಗೆ ನಿಶ್ಶಸ್ತ್ರನಾಗು ಇಲ್ಲವೆ ಅಣು ಬಾಂಬಿಗೆ ಸಿದ್ಧನಾಗು ಎಂದು ಕೊನೆಯೆಚ್ಚರಿಕೆ ಕೊಡಬೇಕೆಂದು ಹೇಳಿದರು.

ಕಳೆದ ವಾರ ಅಧ್ಯಕ್ಷ ಟ್ರೂಮನ್ನರು ಒಂದು ಭೋಜನ ಸಮಾರಂಭದಲ್ಲಿ ಹೇಳಿದರು: "ನಮಗೆ ಯುದ್ಧ ಬೇಕಿಲ್ಲ. ಆದರೆ ನಾವು ಸಕಾಲದಲ್ಲಿ—ಕಾಲಕ್ಕೆ ಮೊದಲೇ—ಕ್ರಮತೆಗೆದುಕೊಂಡು ಜಗತ್ತನ್ನೆಲ್ಲ ವ್ಯಾಪಿಸಬಹುದಾದ ಅನಾಹುತವನ್ನು ಮೊಳಕೆಯಲ್ಲೆ ಕಿತ್ತೊಗೆಯಬೇಕು."

"ಅಮೇರಿಕೆ ಬಲಿಷ್ಠವಾಗಬೇಕು. ನಮ್ಮ ಸೈನಿಕ ಶಕ್ತಿಯನ್ನು ಪ್ರಬಲವಾಗಿಟ್ಟು ನಮ್ಮ ಹೊಣೆಯನ್ನು ನಿರ್ವಹಿಸಲು ನಿರ್ಧರಿಸಿದ್ದೇವೆಂದು ಜಗತ್ತಿಗೆ ಮನಗಾಣಿಸಬೇಕು" ಎಂದರವರು. "ವಿದೇಶಗಳ ಒತ್ತಾಯಕ್ಕೆ ಗುರಿಯಾದ ರಾಷ್ಟ್ರಗಳಿಗೆ ಸಹಾಯಮಾಡಿ ಆಕ್ರಮಣಶೀಲರಿಗೆ ಉಗ್ರ ಪ್ರತಿಭಟನೆಯನ್ನು ತೋರಿಸಬೇಕು" ಎಂದೂ ಅವರು ಹೇಳಿದರು. ಇವೆಲ್ಲ ರಶಿಯಾವನ್ನುದ್ದೇಶಿಸಿ ಹೇಳಿದ ಮಾತುಗಳೆಂಬುದು ಸ್ಪಷ್ಟ.

ಹೀಗಿರುವಾಗ ಅಮೇರಿಕೆಯಿಂದ ಸಾಲ ಪಡೆದ ಸಾಮ್ಯವಾದಿ ಇಂಗ್ಲಂಡು ಸಾಮ್ಯವಾದಿ ರಶಿಯಾದೊಡನೆ ೨೦ ವರ್ಷದಲ್ಲಿ ಹೋರಾಟಕ್ಕೆ ಸಿದ್ಧವಾಗಬಯಸಿದ್ದರಲ್ಲೇನು ಆಶ್ಚರ್ಯ?

## ತುಣುಕುಗಳು

"ಮೋಟಾರ ರಾಜ" ನೆಂಬ ಬಿರುದು ಪಡೆದ ಅಮೇರಿಕೆಯ ಫೋರ್ಡ ಕಂಪನಿಯ ಒಡೆಯನಾದ ಹೆನ್ರಿ ಫೋರ್ಡನು ೮೩ ನೆ ವಯಸ್ಸಿನಲ್ಲಿ ತಾ. ೮ ಕ್ಕೆ ಮೃತನಾದನು. ಹೊಲದ ಕೂಲಿಯಾಳಾಗಿದ್ದ ಈತನು ಇಪ್ಪತ್ತನೆ ವಯಸ್ಸಿನ ನಂತರ ಸ್ವಪ್ರಯತ್ನದಿಂದ ಪ್ರಚಂಡ ಉತ್ಕರ್ಷವನ್ನು ಪಡೆದನು. ಜಗತ್ತಿನಲ್ಲೆಲ್ಲ ಇರುವ ಅವನ ಕಂಪನಿಯ ಸೊತ್ತು ೭೫ ಕೋಟಿ ಡಾಲರು, ಅವನ ಸ್ವಂತ ಆಸ್ತಿ ೨೦ ಕೋಟಿ ಡಾಲರು ಬೆಲೆ ಬಾಳುವಷ್ಟಿದೆ. ತನ್ನ ಕಂಪನಿಯ ಆಡಳಿತೆಯನ್ನು ಮೊಮ್ಮಗನಾದ ಇಮ್ಮಡಿ ಹೆನ್ರಿ ಫೋರ್ಡನಿಗೆ ೧೪ ತಿಂಗಳ ಹಿಂದೆ ಒಪ್ಪಿಸಿದ್ದನವನು ಅವನ ಹೆಂಡತಿಯ ವಯಸ್ಸು ೮೦

※ ※ ※

ಹಿಂದುಸ್ತಾನಕ್ಕೆ ಅಮೇರಿಕೆಯ ಪ್ರಥಮ ರಾಯಭಾರಿಯಾಗಿ ಹೆನ್ರಿ ಗ್ರೇಡಿಯವರನ್ನು ಆರಿಸಿದ್ದಕ್ಕೆ ಸಿನೇಟ ಸಭೆಯ ಸಮ್ಮತಿ ದೊರೆತಿದೆ. ಹಿಂದುಸ್ತಾನಕ್ಕೆ ಅವರು ಹಿಂದೆ ತಾಂತ್ರಿಕ ಶಿಷ್ಟಮಂಡಲದ ಸದಸ್ಯರಾಗಿ ಬಂದಿದ್ದು ಹಿಂದೀಯರ ಉಜ್ವಲ ಭವಿತವ್ಯದಲ್ಲಿ ವಿಶ್ವಾಸವನ್ನು ವ್ಯಕ್ತಗೊಳಿಸಿದ್ದಾರೆ.

※ ※ ※

ಅಮೇರಿಕೆಯಲ್ಲಿ ೧೯೪೦ ರಿಂದೀಚೆಗೆ ಮಕ್ಕಳ ಸುಗ್ಗಿ ಬಹಳ ಚನ್ನಾಗಿದೆಯೆಂದು ವರದಿ ಬಂದಿದೆ. ೧೯೪೦ ರಲ್ಲಿದ್ದುದಕ್ಕಿಂತ ಈಗ ೧೦ ಕೋಟಿ ಜನಸಂಖ್ಯೆ ಹೆಚ್ಚಿದ್ದು, ೧೯೪೦ರಲ್ಲಿದ್ದ ೧೩,೧೬,೬೯,೨೭೫ ರಿಂದ ಅದೀಗ ೧೪,೧೨,೮೪,೬೩೩ಕ್ಕೆ ಬಂದಿದೆ. ಆದರೆ ೧೯೪೦ರಲ್ಲಿ ಗಂಡಸರ ಸಂಖ್ಯೆ ಹೆಂಗಸರಿಗಿಂತ ೪,೫೪,೦೦೦ ಹೆಚ್ಚಾಗಿದ್ದಲ್ಲಿ ಈಗ ಹೆಂಗಸರದೇ ಗಂಡಸರಿಗಿಂತ ೪,೭೦,೦೦೦ ಹೆಚ್ಚಾಗಿದೆ.

※ ※ ※

ಚೀನದಲ್ಲಿ ಸರಕಾರಿ ಸೈನ್ಯಕ್ಕೆ ಕಮ್ಯುನಿಸ್ಟರ ವಿರುದ್ಧ ಕೆಲವೆಡೆ ಪ್ರಚಂಡ ವಿಜಯಗಳು ದೊರೆತಿದ್ದರೂ ಬೇರೆ ಕಡೆ ಕಮ್ಯುನಿಸ್ಟರು ಪ್ರತಿದಾಳಿ ಕೈಕೊಂಡಿದ್ದಾರೆ. ಚೀನಕ್ಕೆ ಸಹಾಯವನ್ನು ತಂದಿದ್ದ ಅಮೇರಿಕನ್ ನಾವಿಕರ ಮೇಲೆ ಕಮ್ಯುನಿಸ್ಟರು ಟಾಂಗ್‌ಕು ಎಂಬಲ್ಲಿ ದಾಳಿ ಮಾಡಿ ೫ ಜನರನ್ನು ಕೊಂದರು ೧೬ ಜನರನ್ನು ಗಾಯಗೊಳಿಸಿದರು.

# ಶಾಶ್ವತ ಏಶಿಯಾ ಪರಿಷತ್ತಿನ ಸ್ಥಾಪನೆ

## ಪಂ. ನೆಹರೂ ಅವರು ಅಧ್ಯಕ್ಷರು

### ೧೯೪೯ ರಲ್ಲಿ ಚೀನದಲ್ಲಿ ಎರಡನೆ ಏಶಿಯಾ ಸಮ್ಮೇಲನ

ಹದಿಮೂರು ದಿನಗಳ ಯಶಸ್ವಿ ಕಾರ್ಯಕಲಾಪಗಳ ನಂತರ ಏಶಿಯಾ ಸಂಬಂಧ ಸಮ್ಮೇಲನ ದಿಲ್ಲಿಯಲ್ಲಿ ಎಪ್ರಿಲ ೨ಕ್ಕೆ ಕೊನೆಗೊಂಡಿತು. ಮಹಾತ್ಮಾ ಗಾಂಧಿಯವರು ಕೊನೆಯ ದಿನ ೨೦೦೦೦ ಜನ ಪ್ರತಿನಿಧಿಗಳು, ಪ್ರೇಕ್ಷಕರು, ನಿರೀಕ್ಷಕರೇ ಮೊದಲಾದವರ ಸಮಕ್ಷಮದಲ್ಲಿ ಏಶಿಯಾದ ಶಾಂತಿ ಸಂದೇಶವನ್ನು ಬೀರಿ "ಪಶ್ಚಿಮವನ್ನು ಪೂರ್ವ ದೇಶಗಳು ಪ್ರೇಮದಿಂದ ಜಯಿಸಬೇಕೆಂ"ದು ಬೋಧಿಸಿದ್ದು ಸಮ್ಮೇಲನಕ್ಕೆ ಅತ್ಯುಚಿತವಾದ ಸಮಾರೋಪವಾಯಿತು.

ಸಮ್ಮೇಲನ ಶಾಶ್ವತವಾದ ಏಶಿಯಾ ಸಂಬಂಧ ಪರಿಷತ್ತನ್ನು ಸ್ಥಾಪಿಸುವ ನಿರ್ಣಯವನ್ನು ಮಾಡಿದೆ.

ಮುಂದಿನ ಸಮ್ಮೇಲನ ಚೀನದಲ್ಲಿ ೧೯೪೯ ರಲ್ಲಿ ಸೇರಬೇಕೆಂದೂ ಗೊತ್ತಾಗಿದೆ. ಈಗ ಸ್ಥಾಪಿಸಲ್ಪಟ್ಟ ತಾತ್ಪೂರ್ತಿಕ ಏಶಿಯನ್ ಸಂಬಂಧ ಮಂಡಲಕ್ಕೆ ಪಂ. ಜವಾಹರಲಾಲರು ಸರ್ವಾನುಮತದಿಂದ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ. ಶ್ರೀ ಬಿ. ಶಿವರಾಯರೂ ಚೀನದ ಶ್ರೀ ಹಾನ ಲೀಹ—ವು ಅವರೂ ಕಾರ್ಯದರ್ಶಿಗಳು.

ಸಂಸ್ಥೆಯ ಶಾಶ್ವತ ಘಟನೆ ಸಿದ್ಧವಾಗುವ ವರೆಗೆ ಮಂಡಲಕ್ಕೆ ತಾತ್ಪೂರ್ತಿಕ ಆದೇಶಗಳನ್ನು ಕೊಡುವ ಸಲುವಾಗಿ ಪಂ. ಜವಾಹರಲಾಲ, ಘನ ಹೊಂದಿದ ಅಲಿ ಅಸಗಾರ ಹೆಕ ಮತ (ಇರಾಣ), ಮಾನ್ಯ ಬಂದರ ನಾಯಕೆ (ಸಿಂಹಳ), ಮಾನ್ಯ ನ್ಯಾಯಮೂರ್ತಿ ಕ್ಯೋ ಮಿಂಟ (ಬ್ರಹ್ಮ) ಮತ್ತು ಡಾ. ಅಬೂ ಹನೀಫಾ (ಇಂಡೋನೇಶಿಯಾ) ಅವರನ್ನೊಳಗೊಂಡ ಉಪಸಮಿತಿಯೊಂದನ್ನು ನೇಮಿಸಲಾಗಿದೆ.

ಏಶಿಯನ್ ಸಂಬಂಧ ಪರಿಷತ್ತಿನ ಸ್ಥಾಪನೆಯ ಗೊತ್ತುವಳಿಯ ಸಾರ ಹೀಗಿದೆ:

ಹೊಸದಿಲ್ಲಿಯ ಏಶಿಯನ್ ಸಂಬಂಧ ಸಮ್ಮೇಲನದಲ್ಲಿ ಸೇರಿದ ಏಶಿಯಾ ದೇಶದ ಶಿಷ್ಟ ಮಂಡಲಗಳ ನಿಶ್ಚಿತಾಭಿಪ್ರಾಯದಲ್ಲಿ, ಜಗತ್ತಿನ ಶಾಂತಿ ವಾಸ್ತವವೂ ಸ್ಥಿರವೂ ಆಗಬೇಕಾಗಿದ್ದರೆ, ಏಶಿಯಾದ ಜನರಿಗೆ ಸ್ವಾತಂತ್ರ್ಯವೂ ಸುಖ ಸಮೃದ್ಧಿಯೂ ದೊರೆಯಬೇಕಾದುದು ಅತ್ಯವಶ್ಯವಾಗಿದೆ. ಅದರಿಂದ ಈ ಸಮ್ಮೇಲನದಲ್ಲಿ ಉಂಟಾದ ಸಂಪರ್ಕವನ್ನು ಉಳಿಸಿ ಬೆಳೆಸಿಕೊಳ್ಳಬೇಕೆಂದೂ ಇಲ್ಲಿ ಪ್ರಾರಂಭವಾದ ಉಪಯುಕ್ತ ಕಾರ್ಯ ಮುಂದುವರಿದು ಸುಸಂಘಟಿತವಾಗಿ ವಿಸ್ತಾರಗೊಳ್ಳಬೇಕೆಂದೂ ಸರ್ವಾನುಮತದಿಂದ ನಿರ್ಣಯಿಸಲಾಗಿದೆ. ಆದುದರಿಂದ ಅವರು ಈ ಮೂಲಕ ಈ ಕೆಳಗಿನ ಉದ್ದೇಶಗಳನ್ನಿಟ್ಟುಕೊಂಡ "ಏಶಿಯನ್ ಸಂಬಂಧ ಪರಿಷತ್ತು" ಎಂಬ ಸಂಸ್ಥೆಯನ್ನು ಸ್ಥಾಪಿಸಲು ನಿಶ್ಚಯಿಸಿದ್ದಾರೆ.

(೧) ಏಶಿಯಾದ ಸಮಸ್ಯೆಗಳನ್ನೂ ಸಂಬಂಧಗಳನ್ನೂ ಏಶಿಯಾದ ಮತ್ತು ಜಾಗತಿಕ ದೃಷ್ಟಿಕೋನಗಳಿಂದ ಅಭ್ಯಸಿಸಿ ಅರಿತುಕೊಳ್ಳಲು ಉತ್ತೇಜನ ಕೊಡಲು;

(೨) ಏಶಿಯಾದ ಜನಾಂಗಗಳಲ್ಲಿ ಪರಸ್ಪರ ಸ್ನೇಹ ಸಂಬಂಧವನ್ನೂ ಸಹಕಾರವನ್ನೂ ಮತ್ತು ಅವುಗಳೊಡನೆ ಜಗತ್ತಿನ ಸಂಬಂಧ ಸಹಕಾರಗಳನ್ನೂ ಸಾಧಿಸಲು;

(೩) ಏಶಿಯಾದ ಜನಾಂಗಗಳ ಹಿತ ಪ್ರಗತಿಗಳನ್ನು ಹೆಚ್ಚಿಸುವ ಸಲುವಾಗಿ;

ಈ ಧ್ಯೇಯಗಳಿಗಾಗಿ ತಾತ್ಪೂರ್ತಿಕ ಮಂಡಲವೊಂದನ್ನು ಸ್ಥಾಪಿಸಲಾಗಿದೆ.

### ಘಟನೆಯ ರೂಪರೇಷೆ

ಏಶಿಯಾ ಸಂಬಂಧ ಪರಿಷತ್ತು ಅದರಲ್ಲಿ ಸೇರ್ಪಡೆ ಹೊಂದಿದ ಪ್ರತಿಯೊಂದು ದೇಶಕ್ಕೊಂದರಂತೆ ರಾಷ್ಟ್ರೀಯ ಘಟಕಗಳನ್ನೊಳಗೊಂಡಿರುವದು. ಈ ಘಟಕಗಳು ಸ್ವರೂಪದಲ್ಲಿ ಸರಕಾರೇತರವಾಗಿದ್ದು ಅವುಗಳ ಧ್ಯೇಯ ಪರಿಷತ್ತಿನ ಧ್ಯೇಯಕ್ಕೆ ಸಮಾನವಾಗಿರಬೇಕು. ಪರಿಷತ್ತೂ ಅದರ ಘಟಕಗಳೂ ಏಶಿಯನ್ ಮತ್ತು ಅಂತರ್‌ರಾಷ್ಟ್ರೀಯ ವಿಷಯಗಳ ಅಭ್ಯಸನದಲ್ಲಿ ನಿರತವಾಗಿರಬೇಕು. ಅವುಗಳ ಪಕ್ಷಪಂಗಡಗಳಲ್ಲಿ ಸೇರ್ಪಡೆ ಹೊಂದಿರಬಾರದು ಮತ್ತು ರಾಜಕೀಯ ಪ್ರಚಾರದಲ್ಲಿ ಕೈಹಾಕಬಾರದು.

ತಾತ್ಪೂರ್ತಿಕ ಮಂಡಲದ ಸದಸ್ಯರು ಸ್ವದೇಶಗಳಿಗೆ ಮರಳಿದ ನಂತರ ಮಾಡಬೇಕಾದ ಮೊದಲ ಕೆಲಸವೆಂದರೆ ಈಗಿರುವ ರಾಷ್ಟ್ರೀಯ ಘಟಕಗಳು ಪರಿಷತ್ತಿನಲ್ಲಿ ಸೇರ್ಪಡೆ ಹೊಂದುವಂತೆ ಮತ್ತು ಅವು ಇಲ್ಲದಲ್ಲಿ ಅಂಥ ಘಟಕಗಳನು ಸ್ಥಾಪಿಸುವಂತೆ ಪ್ರಯತ್ನಿಸುವದು. ಅಂಥ ಸೇರ್ಪಡೆಗಳನ್ನು ಮನ್ನಿಸುವ ಅಧಿಕಾರವನ್ನು ಮಂಡಲಕ್ಕೆ ಕೊಡಲಾಗಿದೆ.

ತಾತ್ಪೂರ್ತಿಕ ಮಂಡಲ ಈ ಮೇಲಿನ ಧ್ಯೇಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ತಾತ್ಪೂರ್ತಿಕ ಘಟನೆಯನ್ನು ಸಿದ್ಧಗೊಳಿಸಿ ಸಾಧಾರಣ ಅಥವಾ ವಿಶೇಷ ಸಮ್ಮೇಲನದ ಮುಂದಿರಿಸುವದು.

ಸಮ್ಮೇಲನದ ಕೊನೆಯ ದಿನ ಫಿಲಿಪಾಯಿನ, ಹೊರ ಮಂಗೋಲಿಯಾ, ಕೋರಿಯಾ ಇಜಿಪ್ತ, ಇಂಡೋನೇಶಿಯಾಗಳ ಪ್ರತಿನಿಧಿಗಳು ಮಾತಾಡಿ ಈ ಸಮ್ಮೇಲನದ ಸಾತ್ವಿಕ ಧ್ಯೇಯವನ್ನು ಬಣ್ಣಿಸಿದರು.

ಪಂ. ನೆಹರೂ ಅವರು ಕೊನೆಯ ಭಾಷಣದಲ್ಲಿ ಈ ಪರಿಷತ್ತಿನ ಮುಂದಿರುವ ಗಹನ ಕಾರ್ಯವನ್ನು ತೋರಿಸಿಕೊಡುತ್ತ "ಇದೀಗ ನಮ್ಮನ್ನು ನಾವು ಅರಿತುಕೊಳ್ಳತೊಡಗಿದ್ದೇವೆ. ಆದ್ದರಿಂದ ಇತರರೂ ಏಶಿಯಾವೆಂದರೆ ಏನೋ ಒಂದು ಸಶಾಶೆಯಲ್ಲ, ವಿವಿಧ ಸಾಮ್ರಾಜ್ಯವಾದಿಗಳ ಕಚ್ಚಾಟದ ರಂಗವಲ್ಲ, ಬರಿ ವ್ಯಾಪಾರವನ್ನು ಬೆಳೆಸುವ ಶೋಷಿಸುವ ಪೇಟೆಯಲ್ಲ ಎಂದೂ ಏಶಿಯಾವು ಸ್ವಾಭಿಮಾನಿಗಳಾದ ಮನುಷ್ಯ ಜೀವಿಗಳಿಂದ ಕೂಡಿದೆ, ಅವರ ಇತಿಹಾಸ ಪ್ರಾಚೀನವಾಗಿದೆ. ಅವರ ಭವಿತವ್ಯವೂ ಉಜ್ವಲವಾಗಲಿದೆ ಎಂದೂ ಮನಗಾಣತೊಡಗಿದ್ದಾರೆ" ಎಂದರು.

### ವರದಿಗಳು

ಸಮ್ಮೇಲನದ ವಿವಿಧ ಉಪಸಮಿತಿಗಳು ಏಶಿಯಾದ ಬೇರೆ ಬೇರೆ ಸಮಸ್ಯೆಗಳನ್ನು ಚರ್ಚಿಸಿ ವರದಿಗಳನ್ನು ಒಪ್ಪಿಸಿದ್ದು ಅವು ಸಮ್ಮೇಲನದ ಮಹಾಸಭೆಯಲ್ಲಿ ಸ್ವೀಕೃತವಾದವು.

❋ ಏಶಿಯಾದ ಸ್ವಾತಂತ್ರ್ಯ ಚಳವಳಿಗಳ ವಿಷಯದ ವರದಿಯು ಚರ್ಚೆ ಬಂದಾಗ ವಿವಿಧ ರಾಷ್ಟ್ರಗಳ ಪ್ರತಿನಿಧಿಗಳು ಬ್ರಿಟಿಶ, ಫ್ರೆಂಚ, ಅಮೇರಿಕನ್ ಸಾಮ್ರಾಜ್ಯವಾದಗಳನ್ನು ಖಂಡಿಸಿದರು. ವರದಿಯಲ್ಲಿ, ರಾಜಕೀಯ ಹಿಡಿತವನ್ನು ಸಡಿಲಿಸಿದರೂ ಆರ್ಥಿಕ ಹಿಡಿತವನ್ನು ಸಾಮ್ರಾಜ್ಯವಾದಿಗಳು ಬಿಗಿಮಾಡಬಹುದೆಂದೂ ಸಿಂಹಳ ಮಲಯಾಗಳಲ್ಲಿ ಬ್ರಿಟಿಶರು ಬೇರೂರಲು ಪ್ರಯತ್ನಿಸಬಹುದೆಂದೂ ಮುಂತಾಗಿ ಕೆಲ ಸದಸ್ಯರು ಭಯ ವ್ಯಕ್ತಗೊಳಿಸಿದರು. ಹಿಂದುಸ್ತಾನದ ಪ್ರತಿನಿಧಿ ಯುದ್ಧ ಸಾರುವದನ್ನೊಂದು ಬಿಟ್ಟು ಬೇರೆಲ್ಲ ವಿಧದಲ್ಲಿ ಇತರ ಪರಾಧೀನ ರಾಷ್ಟ್ರಗಳ ಸ್ವಾತಂತ್ರ್ಯ ಚಳವಳಿಗೆ ಸಹಾಯ ಮಾಡುವದಾಗಿ ಹೇಳಿದನು. ಏಶಿಯಾದ ರಾಷ್ಟ್ರಗಳಿಗೆ ಯುಕ್ತರಾಷ್ಟ್ರ ಸಂಘದಲ್ಲಿ ಸೇರಲು ಹಿಂದುಸ್ತಾನ ಚೀನಗಳು ಬೆಂಬಲ ಕೊಡಬೇಕೆಂದೂ ಆಯಾ ದೇಶದ ಸ್ವಾತಂತ್ರ್ಯ ಚಳವಳಿಗೆ ಅಲ್ಲಿರುವ ಬೇರೆ ಜನಾಂಗದ ಅಲ್ಪಸಂಖ್ಯಾತರು ಬೆಂಬಲ ಕೊಡಬೇಕೆಂದೂ ಇಂಡೋನೇಶಿಯನ್ ಸರಕಾರಕ್ಕೆ ಏಶಿಯಾ ರಾಷ್ಟ್ರಗಳು ಮನ್ನಣೆ ಕೊಡಬೇಕೆಂದೂ ಆ ವರದಿಯಲ್ಲಿ ಸೂಚಿಸಲಾಗಿದೆ.

❋ ಕೂಲಿಕಾರರ ವಿಷಯದ ವರದಿಯಲ್ಲಿ ಏಶಿಯಾದಲ್ಲಿ ಕೂಲಿಕಾರ ಹಾಗು ಒಕ್ಕಲಿಗರ ಜಾಗ್ರತಿಯಾಗುತಿದ್ದು ಕೂಲಿಕಾರ ಸಂಘಗಳು ಬೆಳೆಯುತ್ತಿರುವವೆಂದು ಹೇಳಿರುವದಲ್ಲದೆ ಮಾನವ ಹಕ್ಕುಗಳ ಒಂದು ತಾಮ್ರಪಟವನ್ನು ಸಿದ್ಧಗೊಳಿಸಿ ಅದರಂತೆ ಪ್ರತಿಯೊಬ್ಬನಿಗೆ ಆಹಾರ, ಶಿಕ್ಷಣ, ವಸತಿ, ಸಾಮಾಜಿಕ ಭದ್ರತೆಗಳು ದೊರಕುವಂತೆ ಮಾಡಬೇಕೆಂದು ಸೂಚಿಸಲಾಗಿದೆ.

❋ ಸ್ತ್ರೀಯರ ಹಕ್ಕುಗಳ ವರದಿಯಲ್ಲಿ ಸ್ತ್ರೀಪುರುಷರಿಗೆ ಕಾಯಿದೆಯ ದೃಷ್ಟಿಯಲ್ಲಿ ಸಂಪೂರ್ಣ ಸಮಾನಾಧಿಕಾರಬೇಕೆಂದೂ ಸ್ತ್ರೀಯರಿಗೆ ಮತಾಧಿಕಾರವಿಲ್ಲದಲ್ಲಿ ಆ ಅಧಿಕಾರವನ್ನು ಕೊಡಬೇಕೆಂದೂ ಏಶಿಯಾದ ಸ್ತ್ರೀಯರಲ್ಲಿ ಇನ್ನೂ ನಿಕಟತರ ಸಂಬಂಧವನ್ನು ಸ್ಥಾಪಿಸಬೇಕೆಂದೂ ಸೂಚಿಸಲಾಗಿದೆ.

### ಶಾನುಭೋಗನ ಉತ್ತರ

(೧೫ ನೇ ಪುಟ ನೋಡಿರಿ)

ಶಾನಭೋಗನು ಆ ವೃತ್ತದೊಳಗೆ ಇನ್ನೊಂದು ಚಿಕ್ಕ ವೃತ್ತವನ್ನು ಬರೆದನು. ಮೊದಲನೆ ವೃತ್ತ ಈಗ ದೊಡ್ಡದಾಯಿತೆಂದು ಉತ್ತರ ಹೇಳಿದನು.

## ಪುಸ್ತಕ ಮತ್ತು ವಿಮರ್ಶೆ

(೨ನೇ ಪುಟದಿಂದ)

ಪ್ರೋತವಾಗಿರುವ ಕಥೆಯಲ್ಲಿ ಶ್ಯಾಮಣ್ಣ ಪಾಯದಲ್ಲಿನ ಪಾಪಕೋಸಿನಂತೆ ಅನವ್ಯಕನಾಗಿದ್ದಾನೆ. ಅವನ ತಡಗ ಮುಳುಗಿಸುವಲ್ಲಿ; ಇವನದಾಗಲಿ ಇವನದನ್ನು ಮುಳುಗಿಸುವಲ್ಲಿ ಅವನದಾಗಲಿ ಯಾವ ಅಂಗವೂ ಇಲ್ಲ. ಶಾಮಣ್ಣನಿಗೆ ಮತ್ತು ಅ. ಭಾ. ಕಾಂಗ್ರೆಸ್ಸಿಗೆ ಸಂಬಂಧಿಸಿದ ಅಂಶಗಳನ್ನು ಕಿತ್ತು ಹಾಕಿದರೆ ಕಥೆಯಲ್ಲಿ ಯಾವ ಅಂತರಾಳವೂ ಕಾಣಿಸಲಿಕ್ಕಿಲ್ಲ. ನಿಜವಾಗಿ ಶ್ರೀರಂಗರು ಈ ಪುಸ್ತಕದ ಬಗ್ಗೆ ಪ್ರಶಂಸಾತ್ಮಕವಾಗಿ ಬರೆದ ಮಾತುಗಳಲ್ಲಿ ಉಲ್ಲೇಖಿಸಿದ "ಸ್ವಾತಂತ್ರ್ಯಶಕ್ತಿಯ ವಿಶ್ವರೂಪ ದರ್ಶನ" ದ ಆ ಹಿನ್ನೆಲೆಗೂ ಕಥೆಗೂ ಅಂಥ ನಿಕಟ ಸಂಬಂಧವೇನಿದೆ? ಒಟ್ಟಿನ ಮೇಲೆ ಆ ಸ್ವಾತಂತ್ರ್ಯ ಶಕ್ತಿಯನ್ನು ಹೀನಾಯವಾಗಿ ಲೇಖಕರು ಕಂಡಂತೆ ಕಥೆ ಓದಿದ ಬಳಿಕ ಭಾಸವಾಗುತ್ತದೆ. ಮೇಲಾಗಿ ವಿಮಲೆಯ ಮತ್ತು ಅವಳ ತಂದೆ ತಾಯಿಗಳ ಕೊನೆಯ ವರ್ತನೆ ಎಳ್ಳಷ್ಟೂ ಮನಗಾಣಿಸುವಂತಿಲ್ಲ. ಬಸಿರಿಯಾದೊಡನೆ ಅವಳ ಕಲ್ಪನೆಯ ಗೋಪುರವೇಕೆ ಕಳಚಿ ಬೀಳಬೇಕಾಗಿತ್ತು? ಅವಳಿಗೇಕೆ ತನ್ನ ಪ್ರಿಯಕರನಲ್ಲಿ ಅಕಸ್ಮಾತ್ ತಿರಸ್ಕಾರ ಬುದ್ಧಿಯುಂಟಾಗಬೇಕಿತ್ತು? ಅಲ್ಲದೆ ಅವರೀರ್ವರ ಪ್ರೇಮಕ್ಕೆ ಒಂದು ಬಗೆಯ ಉತ್ತೇಜನ ಕೊಟ್ಟ ಅವಳ ತಾಯ್ತಂದೆಗಳಾದರೂ ಏಕೆ ಅವರನ್ನೀಗ ಬೇರೆ ಬೇರೆ ಮಾಡ ಬಯಸಬೇಕು? ಈ ಶಂಕೆಗಳಿಗೆ ಸಮಾಧಾನ ದೊರೆಯದೆ ಕಥೆಯ ಕೊನೆಯೂ ಮೂರಾಬಟ್ಟೆಯಾಗಿ ಹೋದಂತೆನಿಸುವದು. ಅಥವಾ ಗಾಲ್ಸ ವರ್ದಿಯವರ ಐರೀನ್ ಹೇಳುವಂತೆ ಇಲ್ಲಿ "ತರ್ಕಕ್ಕೆ ಎಡೆಯಿಲ್ಲ"ವೆ? ಕಥೆ ಹಾಗೆ ಕೊನೆಗೊಳ್ಳಬೇಕೆಂದು ಲೇಖಕರು ಇಚ್ಛಿಸಿದರು. ಅದು ಹಾಗೆ ಕೊನೆಗೊಂಡಿದೆ. ಇಷ್ಟೆ!

ಶ್ರೀ "ಹೇಮಂತರ" "ಭಗ್ನ ಮಂದಿರದಲ್ಲಿ" ಅಗಸ್ಟ ಚಳವಳಿ "ಮೂರಾಬಟ್ಟೆ" ಯಲ್ಲಿರುವದಕ್ಕಿಂತ ಹೆಚ್ಚು ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಅದರಲ್ಲಿಯ ಶ್ಯಾಮ ಹೆಚ್ಚು ಮನೋದಾರ್ಢ್ಯವುಳ್ಳ ಮನುಷ್ಯ. ಕೇವಲ ತಂದೆಯ ಋಣ ತೀರಿಸುವಗೋಸುಗ ಆತ ಒಲ್ಲದವಳನ್ನು ಮದುವೆಯಾಗಿ ಸ್ವಾರ್ಥತ್ಯಾಗ ಮಾಡುವ. ಶೀಲೆಯ ಮನಸ್ಸು ಶಾಮನಿಂದ ಜಹಗೀರದಾರನ ಕಡೆ ಹೊರಳುವ ಬಗೆಯನ್ನೂ ಅದಕ್ಕೆ ಸಂಬಂಧಿಸಿದ ಮನೋವ್ಯಾಪಾರಗಳನ್ನೂ ಅವರು ಹೆಚ್ಚು ಸಫಲವಾಗಿ ವರ್ಣಿಸಿದ್ದಾರೆ ಇಡೀ ಕಥೆ ಹೆಚ್ಚು ಮನಗಾಣಿಸುವಂತಿದೆ. ಪಾತ್ರಗಳೂ ಹೆಚ್ಚು ಸುಸಂಬದ್ಧವಾಗಿವೆ. ಆದರೆ ವರ್ಣನೆಗಳ ಅತಿರೇಕ, ಶಾಸ್ತ್ರೀಯ ಚರ್ಚೆಗಳು ಮಿತಿಮೀರಿ ಬೆಳೆದುದರಿಂದ ಕಥೆಯ ಪರಿಣಾಮ ಆಗಬೇಕಾದಷ್ಟು ಆಗುವದಿಲ್ಲ. ಕಡಿಮೆಯೆಂದರೆ ೫೦ ಪುಟಗಳನು ಕತ್ತರಿಸಿದ್ದರೆ ಕಥೆಗೆ ಇನ್ನಷ್ಟು ಕಸುವು ಬರುತ್ತಿತ್ತು.

ಶ್ರೀ ಇನಾಂದಾರರ ಕಥನ ಶಕ್ತಿಗೆ ನಾವು ತಲೆದೂಗುವೆವು. ಅದರ ಬಲದಿಂದಲೇ ಅವರು ಮನಗಣಿಸಲಾರದ ಕಥೆಯನ್ನು ಒಂದೋಟಕ್ಕೆ ಮನಗಾಣುವಂತೆ ಭಾಸಗೊಳಿಸಬಲ್ಲವರಾದರು. ಆದರೆ ಇಲ್ಲಿ ಅವರು ಅಸ್ಥಾನದಲ್ಲಿ ಸಂಚರಿಸಿದ್ದಾರೆ. ಹೇಮಂತರು ಭಾರತೀಯ ವಿಪ್ಲವದ ಶಕ್ತಿಯನ್ನು ಸಹಾನುಭೂತಿಯಿಂದ ಕಂಡಿದ್ದಾರೆ. ಪಾತ್ರಗಳೂ ಹೆಚ್ಚು ಸಹಜವಾಗಿ ವರ್ತಿಸುತ್ತವೆ. ಅವರು ಬಿಗುಹನ್ನು ತೋರಿದರೆ ಉತ್ತಮ ಕಾದಂಬರಿಗಳನ್ನು ನಿರ್ಮಿಸಬಲ್ಲರು.

## ಎಲ್ಲಿ ನೋಡಿದಲ್ಲಿ ಹೊಲೆಯದೆ ಹಾವಳಿಯು ?

೧

ಎಲ್ಲಿನೋಡಿದರಲ್ಲಿ ಹೊಲೆಯರದೆ ಹಾವಳಿಯು?
ದ್ವಿಜರ ಗೋಳನು ಕೇಳಿ ಕೊರಗುವವ ಕಾಣನೆ?
ಮನಕೆ ನೆಮ್ಮದಿ ಇಲ್ಲ, ಉಂಡುದುದು
ಸವಿಯಿಲ್ಲ.
ಎನ್ನ ಮನವನೆ ಕೇಳಿ ಕೇಳಿ ಬಲು ಪೀಡಿಸಿದೆ:
"ನಾ ಯಾರು? ಎನಗಿನಿತು ಉದ್ವೇಗ ಏಕೆಂದು?"
ಬಂಬಳಲಿ ಬೆಂಡಾದೆ ಮಾರ್ದನಿಯು
ದೊರೆಯದೆ.

೨

"ಬಾನಿನಲಿ ಮಿನುಗುವಾ ಚಂದದಾ ಚುಕ್ಕಿಗಳೆ!
ನಿಮ್ಮಂತೆ ಸುಖಿಯಾಗಿ ಬೆಳಗಿ ಬಾಳುವೆನೆಂತು?
ಬೆಳದಿಂಗಳಲಿ ಮಲಗಿ ನಿದ್ರಿಸುವ ತಂಗೊಳವೆ!
ನಿನ್ನಂತೆ ಮೈಮರೆತು ಮಲಗಿ ನಿದ್ರಿಸಲೆಂತು?
ಹಸಿರು ಮುರಿಯುವ ಹುಲ್ಲೆ! ಬಗ್ಗಿಸುವ
ಕೋಗಿಲೆಯೆ!
ಮನದಿ ಶಾಂತಿಯ ತಾಳಿ ನಾ ಹಾಡಲೆಂತು ?"

೩

"ಹುಚ್ಚು ಹಿಡಿದಿದೆಯೇನು? " ಕೇಳಿದನು
ತಂಗಾಳಿ,
"ಕೊಳದಂತೆ ಶಾಂತಿಯಲಿ, ಚುಕ್ಕಿಯಂದದಿ
ಮಿನುಗಿ
ಪಿಕದಂತೆ ಸುಸ್ವರದಿ, ಹಾಡಿ ಮೆರೆಯಲು ಬೇಕೆ?
ಒಂದೆ ತಾಯಿಯ ಎದೆಯ ಹಾಲುಂಡು
ಬೆಳೆದವರು
ಭೇದ ಭಾವವ ಬೆಳಸಿ ಖೇದ ಕೊಳ್ಳುವದೇಕೆ?
ತಾಯ ಸೋದರರಗಲಿ ಶಾಂತಿಯರಸುವದೇಕೆ."

ಪಾ. ರಘೂತ್ತಮಾಚಾರ್ಯ

ಕರ್ಮವೀರ
ಹರಿಜನ ಪುರವಣಿ

# ಪ್ರಗತಿಯೆಂದರೇನು?

ಭಾರೀ ಉದ್ಯೋಗಗಳನ್ನು ಹಬ್ಬಿಸುವದಕ್ಕೂ ಆಧುನಿಕತೆ, ವಿಜ್ಞಾನ, ಪ್ರಗತಿಗಳಿಗೂ ಸಂಬಂಧವುಂಟೆಂಬ ಕಲ್ಪನೆ ಪ್ರಚುರವಾಗಿದೆ. ಪತ್ರಲೇಖಕರು ಬಾರಿಬಾರಿಗೂ ಈ ಪಲ್ಲವಿಯನ್ನು ಹಾಡುತ್ತಾರೆ. ಜವಳಿ ಗಿರಣಿಗಳಿಗೆ ಉತ್ತೇಜನ ಕೊಡದಿರುವದು, ಅಕ್ಕಿ ಗಿರಣಿಗಳನ್ನು ಪ್ರತಿಬಂಧಿಸುವದೇ ಮೊದಲಾದ್ದರಿಂದ ಕಾಲ ಪ್ರವಾಹವನ್ನು ಹಿಂತಿರುಗಿಸಿದಂತಾಗುವದಿಲ್ಲವೇ ಎಂದು ಕೇಳುತ್ತಾರೆ. ಆದುದರಿಂದ ಪ್ರಗತಿಯೆಂದರೇನು, ವೈಜ್ಞಾನಿಕತೆಯೆಂದರೇನು ಎಂಬದನ್ನು ಕೆಲ ಕ್ಷಣ ಚಿಂತಿಸುವದು ವಿಹಿತ.

ಇಂದು ಏನನ್ನಾದರೂ ತಿರುತಿರುಗಿ ಜನರಿಗೆ ಹೇಳುತ್ತ ಬಂದರೆ ಅದನ್ನು ಅವರು ನಂಬುತ್ತಾರೆ. ಪ್ರಚಾರವೊಂದು ಶಾಸ್ತ್ರವೇ ಆಗಿಬಿಟ್ಟು ವೈಯಕ್ತಿಕ ವಿಚಾರಶಕ್ತಿಯನ್ನು ಗಡಿದಾಟಿಸಿದೆ. ಶಾಲೆ ಕಾಲೇಜುಗಳಲ್ಲಿನ ಶಿಕ್ಷಣವೆಂದರೂ ಅರೆಬೆಂದ ಅರ್ಧ ಸತ್ಯಗಳ ಅರ್ಕವನ್ನು ಕುಡಿಸುವ ಕೆಲಸವಾಗತೊಡಗಿದೆ. ಸರಿಯಾಗಿ ಅರಿತುಕೊಂಡರೆ, ಎಲ್ಲ ಗ್ರಾಮೋದ್ಯೋಗಗಳಿಗೂ ವಿಜ್ಞಾನವೇ ಆಧಾರವಾಗಿದೆ; ಮತ್ತು ಗ್ರಾಮೋದ್ಯೋಗಗಳು ವೈಜ್ಞಾನಿಕ ಸಂಶೋಧನೆಗೂ ಅದರ ಉಪಯೋಗಕ್ಕೂ ಧಾರಾಳವಾಗಿ ಅವಕಾಶ ಕೊಡುತ್ತವೆ.

## ವಿಜ್ಞಾನವೆಂದರೇನು ?

ವಿಜ್ಞಾನವೆಂಬುದು ಮನುಷ್ಯನಿರ್ಮಿತವಲ್ಲ. ಪ್ರಕೃತಿಯ ಕಾರ್ಯ ಅನುಲ್ಲಂಘ್ಯ ನಿಯಮಗಳನ್ನನುಸರಿಸಿ ಸ್ಪಷ್ಟವಾದ ಕ್ರಮದಲ್ಲಿ ನಡೆಯುತ್ತದೆ. ಮನುಷ್ಯನು ಈ ನಿಯಮಗಳನ್ನು ಅರಿತುಕೊಂಡು, ಅವನ್ನು ಒಂದು ಶಾಸ್ತ್ರವಾಗಿ ರೂಪಿಸಿಕೊಂಡಾಗ ಅದಕ್ಕೆ ವಿಜ್ಞಾನವೆನ್ನುತ್ತಾರೆ. ಹೀಗೆ ಪ್ರಕೃತಿ ನಿಯಮಕ್ಕೆ ಅನುಗುಣವಾಗಿದ್ದರೆನೇ ಯಾವದೇ ಕರ್ಮ ವಿಜ್ಞಾನಶುದ್ಧವೆಂದು ನಿಷ್ಪನ್ನವಾಗುತ್ತದೆ. ಪ್ರಕೃತಿ ನಿಯಮಗಳಿಂದ ನಾವು ಎಷ್ಟು ಮಟ್ಟಿಗೆ ವಿಚಲಿತರಾಗುವೆವೋ ಅಷ್ಟು ಮಟ್ಟಿಗೆ ನಾವು ವಿಜ್ಞಾನವಿರುದ್ಧ ಅಥವಾ ಅಶಾಸ್ತ್ರೀಯರಾಗುತ್ತೇವೆ. ಪ್ರಕೃತಿ ನಿಯಮವನ್ನು ಮನುಷ್ಯನು ಎಲ್ಲೋ ಅಸ್ಫುಟವಾಗಿ ಅರಿತುಕೊಂಡಿದ್ದಾನೆ. ಆ ಜ್ಞಾನವನ್ನು ತನಗೆ ಬೇಕಾದಂತೆ ಉಪಯೋಗಿಸಿಕೊಳ್ಳಹೋಗಿ ಅವನು ಪ್ರಕೃತಿ ಹಾಕಿಕೊಟ್ಟ ದಾರಿಯಿಂದ ಭ್ರಷ್ಟನಾಗುತ್ತಾನೆ. ಇಂಥ ಭ್ರಂಶ ಕೊನೆಗೆ ಅವನ ಸ್ವಂತ ನಾಶದಲ್ಲಿಯೆ ಪರ್ಯವಸಾನ ಹೊಂದುತ್ತದೆ. ಏಕೆಂದರೆ, ಸ್ವಯಂ ಮನುಷ್ಯನೇ ಪ್ರಕೃತಿ ನಿರ್ಮಿತನಲ್ಲವೆ ? ಈ ನಾಶ ಅವನ ಸ್ವಂತ ಹಸ್ತದಿಂದಾಗಬಹುದು ಇಲ್ಲವೆ ಅಪೂರ್ಣ ಜ್ಞಾನದ ದುರುಪಯೋಗದಿಂದಾಗಲೂ ಬಹುದು

## ಪ್ರಗತಿ

ಪ್ರಗತಿಯೆಂಬುದು, ಪ್ರಕೃತಿಯಲ್ಲಿರುವ ಜ್ಞಾನ ಸತ್ಯಗಳ ಅನುಸಂಧಾನ ಮತ್ತು ಮಾನವನ ಅವಶ್ಯಕತೆಗಳಿಗೆ ಅದರ ಉಪಯೋಗ ಇವೆರಡನ್ನೂ ಸೂಚಿಸುತ್ತದೆ. ಪ್ರಕೃತಿ ನಿಯಮಗಳಿಗನುಕೂಲವಾಗಿ ನಾವು ನುಗ್ಗಿದಷ್ಟು ಮಟ್ಟಿಗೆ ಸರಿಯಾದ ದಾರಿಯಲ್ಲಿ ಪ್ರಗತಿ ಹೊಂದಿದಂತೆ. ಬದಲಿಗೆ ಅದಕ್ಕೆ ಪ್ರತಿಕೂಲವಾಗಿ ನುಗ್ಗಿದರೆ ಅಷ್ಟು ಮಟ್ಟಿಗೆ ಹಿಂಸೆಯನ್ನೂ ನಾಶವನ್ನೂ ಉಂಟುಮಾಡಿದಂತಾಗುವದು. ಅವು ಸಾಮಾಜಿಕ ಕಲಹದ ರೂಪ ತಾಳಬಹುದು, ಅನಾರೋಗ್ಯದ, ಇಲ್ಲವೆ ಶಂಕಾಭಯ ದ್ವೇಷಗಳಂಥ ಸಮಾಜದ್ರೋಹಿ ಭಾವನೆಗಳ ಹಬ್ಬುಗೆಯ ರೂಪದಲ್ಲಿ ಕಾಣಿಸಿಕೊಳ್ಳಬಹುದು. ಈ ಮುಂಗುರುಹುಗಳಿಂದಲೇ ನಾವು ನಮ್ಮ ಪ್ರಗತಿ ವಿಜ್ಞಾನಾನುಸಾರವಾಗಿದೆಯೋ ಇಲ್ಲವೋ ಎಂಬದನ್ನು ತಿಳಿದುಕೊಳ್ಳಬಹುದು. ನಮ್ಮ ಕಾರ್ಯಸರಣಿಯ ಪರಿಣಾಮವಾಗಿ ಸೌಹಾರ್ದ, ಶಾಂತಿ, ಸಂತುಷ್ಟಿಗಳುಂಟಾದರೆ, ಆಗ, ನಮ್ಮ ಲೌಕಿಕ ಉನ್ನತಿಯೆಷ್ಟೇ ಕಡಿಮೆಯಾಗಿರಲಿ, ನಾವು ಪ್ರಗತಿಯ ಪಕ್ಷದಲ್ಲಿದ್ದೇವೆ. ಅದು ಅಸಂತುಷ್ಟಿ, ಕಲಹಗಳಲ್ಲಿ ಪರ್ಯವಸಾನ ಹೊಂದಿದರೆ, ನಮ್ಮ ಲೌಕಿಕ ಸಂಪತ್ತಿಯೆಷ್ಟೇ ಧಾರಾಳವಾಗಿದ್ದರೂ ನಾವು ವಕ್ರಗತಿ ಅಥವಾ ಹಿನ್ನಡೆಯಲ್ಲಿ ತೊಡಗಿದ್ದೇವೆಂದು ತಿಳಿಯಬೇಕು.

## ವೈಜ್ಞಾನಿಕ ಚಟುವಟಿಕೆ

ತನ್ನ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸಲು ಮನುಷ್ಯನು ಕೈಕೊಂಡ ಚಟುವಟಿಕೆಗಳು, ಅದು ಕಾರಣ, ಬರಿ ಲೌಕಿಕ ವಸ್ತುಗಳನ್ನಷ್ಟೇ ಹುಟ್ಟಿಸದೆ, ಅವನ ವ್ಯಕ್ತಿತ್ವದ ವಿಕಾಸಕ್ಕೂ ಹಿತಕರವಾಗಿರಬೇಕು. ಮನುಷ್ಯನು ಆಹಾರವನ್ನು ತಿಂದಾಗ ಅದು ಅವನ ನಾಲಗೆಯ ಲಾಲಸೆಯನ್ನು ಮಾತ್ರ ಹಿಂಗಿಸುವದಲ್ಲದೆ, ಅವನ ದೇಹದೊಳಗಿನ ಹಾಳಾದವ್ಯರ್ಥ ಪದಾರ್ಥಗಳನ್ನು ತುಂಬಿಕೊಟ್ಟು ಅದನ್ನು ಸುಸ್ಥಿತಿಯಲ್ಲಿರಿಸಿ, ಅಧರ ಬೆಳವಣಿಗೆಗೂ ವಿಕಾಸಕ್ಕೂ ಹಾದಿ ಮಾಡಿಕೊಡುತ್ತದೆ. ಅದು ಅವನ ಲಾಲಸೆಯನ್ನಷ್ಟೆ ಹಿಂಗಿಸಿ ಉಳಿದೆರಡು ಅವಶ್ಯಕತೆಗಳನ್ನು ಪೂರೈಸದೆ ಹೋದರೆ ಅದರಿಂದೇನೂ ಪ್ರಯೋಜನವಿಲ್ಲ. ಒಬ್ಬನು ಸಖರೀನ ಹಾಕಿ ಸವಿ ಮಾಡಿದ ನೀರನ್ನು ಕುಡಿಯುವ ಚಾಳಿಯನ್ನೇ ಇಟ್ಟುಕೊಂಡರೆ, ಅವನು ಅದರ ರುಚಿಗೆಷ್ಟೇ ಮನಸೋತಿದ್ದರೂ ದೇಹವನ್ನು ಬೆಳೆಸುವ, ರಕ್ಷಿಸುವ, ಕೆಟ್ಟಿದ್ದನ್ನು ತುಂಬಿಕೊಡುವ ಧಾತುಗಳು ಅದರಲ್ಲಿ ಸಾಕಷ್ಟು ಇಲ್ಲದಿರುವದರಿಂದ ಅವನು ಆರೋಗ್ಯ ದೇಹದಾರ್ಢ್ಯಗಳನ್ನು ಪಡೆಯಲಾರನು. ರುಚಿಯೆಂಬುದು ಅಪೇಕ್ಷಣೀಯವೇನೊ ನಿಜ, ಆದರೆ ಅದೇ ಸರ್ವಸ್ವವಲ್ಲ. ನಮ್ಮ ಆಹಾರದ ಮುಖ್ಯ ಕಾರ್ಯ ಅದು ನಾಲಗೆಯನ್ನು ಬಿಟ್ಟುಹೋದ ನಂತರವೇ ಜರಗುವದು. ನಮ್ಮ ಶರೀರದಲ್ಲಿ ಅದು ರಕ್ತಗತವಾಗುವ ರೀತಿಯೇ ಕೊನೆಗೆ ಎಲ್ಲಕ್ಕಿಂತ ಮಹತ್ವದ ಪರಿಣಾಮ ಮಾಡುತ್ತದೆ. ಅದೇ ರೀತಿ, ಕೆಲಸವನ್ನೂ ಅದರ ಬಾಹ್ಯ ರೂಪದಿಂದ ಅಳೆಯಬಾರದು, ಹುಟ್ಟಿಸಿದ ವಸ್ತುಗಳ ಪರಿಮಾಣದಿಂದಲೂ ಅದನ್ನು ಗೊತ್ತುಮಾಡಬಾರದು. ಕೆಲಸದಿಂದ ಮಾನವ ವ್ಯಕ್ತಿತ್ವದ ವಿಕಾಸವಾಗುವಂತಿರಬೇಕು; ಅದು ಎಲ್ಲ ಮಾನವ ಕೌಶಲಗಳಿಗೆ ಆಹಾರದಂತಿರಬೇಕು. ಲೋಭದಿಂದಾಗಲಿ, ತಪ್ಪು ಕಲ್ಪನೆಗಳಿಂದಾಗಲಿ, ಅಥವಾ ಹಿತಮಿತದ ಅರಿವು ತಪ್ಪಿಯಾಗಲಿ, ಒಳದಾರಿ ಹುಡುಕುವ ಹವ್ಯಾಸಕ್ಕೆ ಬಿದ್ದು ಪ್ರಕೃತಿ ನಿಯಮದಲ್ಲಿ ಹಸ್ತಕ್ಷೇಪ ಮಾಡಿದರೆ ಹೆಚ್ಚಾಗಿ ಅದರಿಂದ ಅಪವ್ಯಯವೇ ಉಂಟಾಗುವದು. ಪ್ರಕೃತಿಗೆ ಒಳದಾರಿಗಳಲ್ಲಿ ವಿಶ್ವಾಸವಿಲ್ಲ. ಪರಮಾತ್ಮನ ಚಕ್ರ ಸಾವಕಾಶವಾಗಿ ತಿರುಗುತ್ತದೆ. ಅದ್ದರಿಂದ ಅವಸರ ಪಟ್ಟು ಎಷ್ಟೋ ವೇಳೆ ನಮ್ಮನ್ನೆ ನಾವು ಹಾಳುಮಾಡಿಕೊಂಡು, ಇಂಥ ಶೀಘ್ರಫಲವೇ ಪ್ರಗತಿಯ ಲಕ್ಷಣವೆಂದು ನೆನೆಸಿಕೊಳ್ಳುತ್ತೇವೆ.

## ಆಹಾರ

ಉದಾಹರಣೆಗಾಗಿ, ಆಹಾರ ಧಾನ್ಯ, ಹಣ್ಣು ಹಂಪಲು, ತತ್ತಿ ಮೊದಲಾದ ಎಲ್ಲ ಪೋಷಕ ವಸ್ತುಗಳನ್ನು, ಅವುಗಳೊಳಗಿನ ದ್ರವ್ಯಗಳು ಸುರಕ್ಷಿತವಾಗಿಯೂ ಅವನ್ನು ಉಪಯೋಗಿಸುವವರಿಗೆ ಬೇಕಾದ ಪ್ರಮಾಣದಲ್ಲಿಯೂ ಉಳಿಯುವಂತೆ, ಪ್ರಕೃತಿಯೇ ಜತನದಿಂದ ಹೊದಿಸಿರುತ್ತದೆ. ಆದರೆ ಪ್ರಕೃತಿಯ ಹೊದಿಕೆಯನ್ನು ಕಿತ್ತೊಗೆದು ನಾವು ಒಂದು ಪ್ರತಿಕೂಲ ಪ್ರಭಾವವನ್ನು ನಿರ್ಮಿಸುತ್ತೇವೆ. ಅದು ಆಹಾರದ ಯೋಗ್ಯತೆಯನ್ನು ನಿರ್ನಾಮ ಮಾಡುತ್ತದೆ.

ಒಂದೇ ದೃಷ್ಟಾಂತ ತೋರಿಸಬೇಕಾದರೆ, ಒಳಗೆ ಧಾನ್ಯವನ್ನಿಟ್ಟು ಅದರ ಮೇಲೆ ತೌಡಿನ ಲೇಪ ಹಚ್ಚಿ ಮೇಲೆ ಸಿಪ್ಪೆಯ ಹೊದಿಕೆಯನ್ನು ಹೊಚ್ಚಿ ಪ್ರಕೃತಿ ಭತ್ತವನ್ನು ನಿರ್ಮಿಸಿದೆ. ಇದನ್ನು ತಿನ್ನಬೇಕಾದರೆ ಮನುಷ್ಯ ಸಿಪ್ಪೆಯನ್ನಷ್ಟೆ ತೆಗೆದರೆ ಸಾಕು. ಕವಚವನ್ನು ಕಿತ್ತ ಮೇಲೆ, ಅದರ ಪೌಷ್ಟಿಕ ಗುಣಕ್ಕಾಗಿ ನುಸಿ, ಹುಳಹುಪ್ಪಡಿ, ಇಲಿ ಹೆಗ್ಗಣಗಳೇ ಮೊದಲಾದವು ಅಕ್ಕಿಯ ಮೇಲೆ ಎರಗುತ್ತವೆ. ಆದುದರಿಂದ ತತ್ಕಾಲಕ್ಕೆ ಬೇಕಾದಷ್ಟೆ ಭತ್ತವನ್ನು ಕುಟ್ಟಿ ಸಿಪ್ಪೆ ತೆಗೆಯಬೇಕು. ಉಳಿದುದನ್ನು ಭತ್ತವಾಗಿಯೆ ಇಡಬೇಕು. ಆಗ ಮಾತ್ರ ಆ ಧಾನ್ಯವನ್ನು ತಿಂದ ಪೂರ್ಣ ಪ್ರಯೋಜನ ನಮಗೆ ದೊರಕುವದು. ಆದರೆ ಮನುಷ್ಯನಿಗೆ ಅವಸರ. ಅವನು ಭತ್ತವನ್ನು ಗಿರಣಿಯಲ್ಲಿ ಕುಟ್ಟಿಸುತ್ತಾನೆ. ಹೀಗೆ ಕುಟ್ಟಿದ ಅಕ್ಕಿಯನ್ನು ಉಗ್ರಾಣದಲ್ಲಿಡುವದು ಸುರಕ್ಷಿತವಲ್ಲದಿರುವದರಿಂದ ಅದನ್ನು ಕೊಳಸಿ ಮೇಲಿನ ತೌಡಿನಲ್ಲಿರುವ ಎಲ್ಲ ಪೌಷ್ಟಿಕ ದ್ರವ್ಯಗಳನ್ನು ನಾಶ ಮಾಡುತ್ತಾನೆ. ಹೀಗೆ ಮಾಡುವದರಿಂದ ಅಕ್ಕಿಯ ಸಂಗ್ರಹ ಯೋಗ್ಯತೆಯೇನೋ ಹೆಚ್ಚುವದು. ಆದರೆ ಅದರ ಆಹಾರ ಯೋಗ್ಯತೆ ಮಾತ್ರ ನಷ್ಟವಾಗುವದು. ಪ್ರಕೃತಿ ನಿಯಮದಲ್ಲಿ ಮನುಷ್ಯ ಕೈ ಹಾಕುವದು ಶುದ್ಧ ವಿಜ್ಞಾನ ವಿರುದ್ಧ ಅಥವಾ ಅಶಾಸ್ತ್ರೀಯವಾಗಿರುವದಕ್ಕೆ ಇದೊಂದು ಉದಾಹರಣೆ. ಅದು ಮನುಷ್ಯನಿಗೆ ಹಾನಿಯುಂಟುಮಾಡುತ್ತದೆ. ಆದುದರಿಂದ ಭತ್ತದ ಗಿರಣಿಗಳು ಪ್ರಗತಿಗೆ ವಿರುದ್ಧವಾದುವು; ಮತ್ತು ಅದರ ಯಂತ್ರಗಳ ರಚನೆಯೆಷ್ಟೇ ಕೌಶಲವನ್ನು ತೋರಿಸಲಿ, ನಿಜವಾಗಿ ಅದು ವಿಜ್ಞಾನವಿರುದ್ಧವೆ.

## ಸಮೃದ್ಧಿಯ ವಿನಿಯೋಗ

ಪ್ರಕೃತಿ ಸಮೃದ್ಧಿಯ ಶಾಸ್ತ್ರೀಯ ಉಪಯೋಗವೆಂದರೆ ನಮ್ಮ ಸುತ್ತಲೂ ಕಾಣಸಿಗುವದರ ಪರಮಾವಧಿ ಸದ್ವಿನಿಯೋಗವನ್ನು ಮಾಡಿಕೊಳ್ಳುವದೆಂದು ಅರ್ಥವಾಗಬೇಕು. ಯಾಂತ್ರಿಕ ಸಾಧನಗಳನ್ನುಪಯೋಗಿಸುವ ಆತುರದಲ್ಲಿ ಮನುಷ್ಯನು ಎಷ್ಟೋ ವೇಳೆ ಸಮೃದ್ಧಿಯ ಉಪಯೋಗದಲ್ಲಿ ಅವಿವೇಕವನ್ನು ತೋರಿಸುತ್ತಾನೆ. ಉದಾಹರಣೆಗೆ, ಬಿದಿರಿನಿಂದ ಕಾಗದ ಮಾಡುವಾಗ ಸರಳ ಕೈಗಾರಿಕೆಯ ರೀತಿಯನ್ನುಪಯೋಗಿಸಿದರೆ ಅಡವಿಯಿಂದ ಕಡಿದು ತಂದ ಹೊಸ ಇಡಿ ಬಿದಿರುಗಳನ್ನು ನಾವು ಉಪಯೋಗಿಸುವದಿಲ್ಲ. ಅಡವಿಯ ಬಿದಿರನ್ನು ಮೊದಲು ಕಡಿದು ತಂದೊಡನೆ, ಮನೆಯ ಚಪ್ಪರ ಕಟ್ಟುವದು, ಚಾಪೆ, ಬುಟ್ಟಿ, ತಟ್ಟಿ ಮೊದಲಾದ ಗೃಹಕೃತ್ಯದ ಸಾಮಗ್ರಿಗಳನ್ನು ತಯಾರಿಸುವದೇ ಮುಂತಾದ ಇತರ ಕಾರ್ಯಗಳಿಗೆ ಅದನ್ನು ಉಪಯೋಗಿಸಿ, ಕೊನೆಗೆ, ಈ ಕೆಲಸಕ್ಕೆ ಅವು ಬಂದು ಆಯುಷ್ಯ ಮುಗಿಸಿದ ಮೇಲೆ ಮುರುಕು, ಲಡ್ಡು ತುಂಡು ತುಣುಕು ಬಿದಿರುಗಳನ್ನು ಕುಟ್ಟಿ ಕಾಗದ ಮಾಡುವ ಮುದ್ದೆಯನ್ನು ಸಿದ್ಧಗೊಳಿಸಲಾಗುವದು.

ಆದರೆ ವಿಜ್ಞಾನವಾದಿಯೆಂದು ಹೇಳಿಕೊಳ್ಳುವ ಉದ್ದಿಮೆಗಾರನಿಗೆ ಈ ಬಗೆಯಲ್ಲಿ ಕೆಲಸ ಮಾಡುವದು ಸಾಧ್ಯವಿಲ್ಲ. ಅವನಿಗೆ ವೇಳೆಯಿಲ್ಲ. ಅವನ ಯಂತ್ರಗಳು ಸತತವೂ ಚಲಿಸುತ್ತಿರಬೇಕಲ್ಲವೆ ಅದರಿಂದ ಅಡವಿಯಿಂದ ಎಳೆ ಬಿದಿರುಗಳನ್ನು ಕಡಿಸಿ ತರಿಸಿ, ಅವುಗಳನ್ನವನು ಯಂತ್ರದ ಬಾಯಿಗೆ ಕೊಟ್ಟು ಕಾಗದ ತಯಾರಿಸುತ್ತಾನೆ. ಇದಕ್ಕಾಗಿ ಅವನು ಬಿದಿರಿನ ಅಡವಿಗಳನ್ನು ಬೆಳೆಸಬೇಕಾಗುವದು. ಅದಕ್ಕೆ ಜನರ ಸತ್ವವನ್ನು ಆ ಮಾರ್ಗದಲ್ಲಿ ಹೊರಳಿಸಬೇಕು. ಮೊದಲಿನ ಪದ್ಧತಿಯನ್ನುಪಯೋಗಿಸಿದ್ದರೆ ಮನುಷ್ಯ ಸತ್ವವನ್ನು ಈ ಸರ್ವಥಾ ಅನವಶ್ಯಕ ಶ್ರಮದಲ್ಲಿ ತೊಡಗಿಸಬೇಕಾಗುತ್ತಿದ್ದಿಲ್ಲ. ಆದುದರಿಂದ ಯಂತ್ರದ್ವಾರಾ ಕಾಗದ ಮಾಡುವದು ಅವೈಜ್ಞಾನಿಕವೂ ಅಪವ್ಯಯಕರವೂ ಆದ ವಿನಿಯೋಗ ಪದ್ಧತಿಯಲ್ಲವೆ ?

ಅದೇ ರೀತಿ, ಪ್ರಕೃತಿಯಲ್ಲಿ ಸಿಗುವ ಪೌಷ್ಟಿಕ ದ್ರವ್ಯಗಳನ್ನು ಆಹಾರ ರೂಪದಲ್ಲಿ ವಿನಿಯೋಗಿಸುವದಾದರೆ, ಕೃಷಿಯೋಗ್ಯವಲ್ಲದ ಭೂಮಿಯಲ್ಲಿ ತಾನಾಗಿ ಬೆಳೆಯುವ ತಾಡವೃಕ್ಷಗಳಿಂದ ಬೆಲ್ಲವನ್ನು ಮಾಡಿಕೊಂಡು, ಅದರ ರಸದಲ್ಲಿರುವ ಜಲಾಂಶವನ್ನು ತೆಗೆದು ಸುಪಾಚ್ಯ ರೂಪದಲ್ಲಿರುವ ಸಕ್ಕರೆ, ವಿವಿಧ ಖನಿಜ ಮತ್ತು ಲವಣಾಂಶಗಳನ್ನು ಉಪಯೋಗಿಸಿಕೊಳ್ಳಬಹುದು.

ಆದರೆ ತನ್ನ ಜ್ಞಾನದ ಉಪಯೋಗ ಮಾಡಿಕೊಳ್ಳುವ ಮನುಷ್ಯ ಭರದಲ್ಲಿ ಸಕ್ಕರೆಯ ಕಾರ್ಖಾನೆಗಳನ್ನು ಹಾಕುತ್ತಾನೆ; ಧಾನ್ಯಗಳನ್ನು ಬೆಳೆಯಲು ಉಪಯುಕ್ತವಾಗಬಹುದಾದ ಒಳ್ಳೆ ಭೂಮಿಯನ್ನು ಕಬ್ಬು ಬೆಳೆಸಲು ಉಪಯೋಗಿಸುತ್ತಾನೆ. ಆ ಮೇಲೆ ಆ ಕಬ್ಬನ್ನು ಸಕ್ಕರೆಯಾಗಿ ಮಾರ್ಪಡಿಸುವಾಗ ಅದರಲ್ಲಿರುವ ಖನಿಜ ಲವಣಗಳ ಬಹುಭಾಗವನ್ನು ಮನುಷ್ಯ ಸೇವನೆಗೆ ಅನರ್ಹವಾಗುವಂತೆ ತೆಗೆದೊಗೆದು, ಮುಂದೆ ಆ ಕಾಕಂಬಿಯಿಂದ ಜಿನ್, ಗಮ್ ಎಂಬ ಮಾದಕ ಪದಾರ್ಥಗಳನ್ನು ಜನರಿಗೆ ವಿಷಕೊಟ್ಟು ಅವರಲ್ಲಿದ್ದ ಹಣವನ್ನು ಕಸಿದುಕೊಳ್ಳಲೋಸುಗ ತಯಾರಿಸುತ್ತಾನೆ.

ಸಕ್ಕರೆಯನ್ನು ತಯಾರಿಸಲಿ ಬೇಕಾದರೂ ಅದನ್ನು ಕೈಯಿಂದ ತಯಾರಿಸಬಹುದು. ತಾಳೆರಸದಿಂದ ಸಕ್ಕರೆ ಕಾಕಂಬಿಯನ್ನು ತೆಗೆದು ಖನಿಜ ಲವಣ ಸಂಪನ್ನವಾದ ಸುಪಾಚ್ಯ ಬೆಲ್ಲವಾಗಿ ಮಾರ್ಪಡಿಸಿಕೊಳ್ಳಬಹುದು. ಆದರೆ ಸಕ್ಕರೆ ಕಾರಖಾನೆಗಳಲ್ಲಿ ಸಕ್ಕರೆ ತಯಾರಿಸಿದ ನಂತರ ಉಳಿಯುವ ಕಾಕಂಬಿ ಮನುಷ್ಯ ಸೇವನೆಗೆ ಅಯೋಗ್ಯವಾಗುತ್ತದೆ. ಏಕೆಂದರೆ ಅದರಲ್ಲಿ ಗಂಧಕ ಪ್ರಯೋಗವಿದೆ. ಕಾಕಂಬಿಯನ್ನು ತೆಗೆದೊಗೆಯಬೇಕು. ಇಲ್ಲವೆ ಮಾದಕ ಪೇಯಗಳನ್ನು ತಯಾರಿಸಬೇಕು.

ಇಲ್ಲಿಯೂ ಸಕ್ಕರೆ ಗಿರಣಿಗಳ ಉಪಯೋಗ ಕೇವಲ ವಿಜ್ಞಾನ ವಿರುದ್ಧವೂ ಪ್ರಕೃತಿ ಸಮೃದ್ಧಿಯ ಅಪವ್ಯಯವೂ ಆಗಿದೆ. ಭತ್ತದ ಗಿರಣಿಗಳಂತೆ ಸಕ್ಕರೆಯವಾದರೂ ಕೆಲವರ ಮಾಲಿಕೆಯನ್ನು ಸೃಷ್ಟಿಗೊಳಿಸಿ ಅವರ ಕೈಯಲ್ಲಿ ಹಣದ ಸಂಗ್ರಹವಾಗುವಂತೆ ಮಾಡುವ ಸಾಧನಗಳು.

ನಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಉಪಾಯಗಳನ್ನು ಹುಡುಕುವಾಗ, ನಮಗೆ ದೊರೆಯುವ ಪ್ರಕೃತಿ ಸಮೃದ್ಧಿಯನ್ನು ನೋಡಿಕೊಂಡು ಅದನ್ನು ಸಾಧ್ಯವಿದ್ದಷ್ಟು ಸದುಪಯೋಗ ಮಾಡಬೇಕು. ಕಲ್ಲಿದ್ದಲಿ ದೊರೆಯದೆ ಕ್ರೂಡ ಆಯಿಲು ಸುಲಭವಾಗಿ ದೊರೆಯುವ ಸ್ಥಳಗಳಲ್ಲಿ ಕಲ್ಲಿದ್ದಲನ್ನು ಉರುವಲವಾಗಿ ಉಪಯೋಗಿಸುವದು ವಿಜ್ಞಾನವಿರುದ್ಧವಾಗುವದು. ಅದೇ ಪ್ರಕಾರ, ಕಲ್ಲಿದ್ದಲು ದೊರೆಯುವಲ್ಲಿ ಮತ್ತು ಕಟ್ಟಿಗೆ ಸಿಗದೆ ಇರುವಲ್ಲಿ ಉರುವಲಕ್ಕಾಗಿ ದೂರ ದೂರದಿಂದ ಕಟ್ಟಿಗೆಯನ್ನು ತರಿಸಿಕೊಳ್ಳುವದೂ ಬುದ್ಧಿಗೇಡಿತನವೇ ಸರಿ. ಹಾಗೆಯೇ, ಮನುಷ್ಯಶಕ್ತಿ ಅಗ್ಗವಾಗಿಯೂ ವಿಪುಲವಾಗಿಯೂ ದೊರೆಯುವಲ್ಲಿ ದೂರ ದೇಶಗಳಿಂದ ಇತರ ಯಂತ್ರ ಶಕ್ತಿಗಳನ್ನು ತರಿಸಿಕೊಳ್ಳುವದು ಅವಿಚಾರದ್ದು. ನಿರುದ್ಯೋಗದಿಂದಲೂ ವೃತ್ತಿಗಳ ಅಭಾವದಿಂದಲೂ ಜನರು ಕಂಗೆಡುತ್ತಿರುವ ಹಿಂದುಸ್ತಾನದಲ್ಲಿ ನಿರುದ್ಯೋಗವನ್ನು ಹೆಚ್ಚಿಸುವ ಗಿರಣಿಗಳ ಮೂಲಕ ಉತ್ಪಾದನೆ ಮಾಡಹೋಗುವದು ಅಕಲ್ಪನೀಯ. ಈ ದೃಷ್ಟಿಯಿಂದ ಸಾವಕಾಶವಾಗಿಯಾದರೂ ಕೈಯಿಂದ ನೂಲು ತೆಗೆಯುವದೇ ವಿಜ್ಞಾನ ಶುದ್ಧ; ಮಾನವ ಪ್ರಗತಿ ಸಾಧಕ. ಜವಳಿ ಗಿರಣಿ ವಿವೇಕ ವಿರುದ್ಧವೂ ಜನರಿಗೆ ವಿಘಾತಕವೂ ಆಗಿದೆ.

## ವಿಕೃತ ರುಚಿ

ಪ್ರಚಾರದಿಂದ ಜನರ ಸ್ವಾಭಾವಿಕ ರುಚಿ ವಿಕೃತಗೊಳ್ಳುತಿದೆ. ವಾಸನೆಯನ್ನೂ ಬಣ್ಣವನ್ನೂ ವರ್ಜಿಸಬೇಕೆಂಬ ನಂಬಿಕೆಯನ್ನು ಅವರಲ್ಲಿ ಹುಟ್ಟಿಸಲಾಗಿದೆ. ಕಾಗದದ ಗುಲಾಬಿ ಹೂ "ನಾರು"ವದಿಲ್ಲವಾದುದರಿಂದ ಅದೇ ಗಿಡದ ಗುಲಾಬಿಗಿಂತ ಶ್ರೇಷ್ಠವೆಂದು ಅವರಿಗೆ ಕಲಿಸುವವರೂ ಬೇಗನೆ ಹುಟ್ಟಬಹುದು. ವ್ಯಾಪಾರೀ ಉದ್ದೇಶದಿಂದ ಈ ಬಗೆಯಾಗಿ ರುಚಿವಿಕೃತಿಯನ್ನು ಬೋಧಿಸಲಾಗುತಿದೆಯೆಂಬುದಕ್ಕೆ "ವನಸ್ಪತಿ" ತುಪ್ಪವನ್ನು ಜನಪ್ರಿಯವಾಗಿ ಮಾಡುವ ಪ್ರಯತ್ನವೂ ಒಂದು ದೃಷ್ಟಾಂತ. ಇಲ್ಲಿ ಕಾರಖಾನೆಗಳು ನೈಸರ್ಗಿಕ ಎಣ್ಣೆಯ ಗಂಧವರ್ಣಗಳನ್ನು ತೆಗೆಯಲಿಕ್ಕೂ ರೂಢಿಗತವಾದ ನೈಸರ್ಗಿಕ ಎಣ್ಣೆಯ ಬದಲು ಪೌಷ್ಟಿಕತೆಯಲ್ಲಿ ಹೀನವಾದ ಎಣ್ಣೆಗಳನ್ನು ತಯಾರಿಸಲಿಕ್ಕೂ ವನಸ್ಪತಿ ಎಣ್ಣೆಗಳನ್ನು ಹೆಪ್ಪುಗಟ್ಟಿಸುವಗೋಸುಗ ಅವುಗಳ ಸುಪಾಚ್ಯತೆಯನ್ನು ಕಡಿಮೆ ಅಥವಾ ನಾಶ ಮಾಡಲಿಕ್ಕೂ ತಮ್ಮ ವೈಜ್ಞಾನಿಕ ಜ್ಞಾನವನ್ನು ಪ್ರಯೋಗಿಸುತ್ತವೆ. ಇದು ವಿಜ್ಞಾನದ ವ್ಯಭಿಚಾರವೇ ಸರಿ. ಇಷ್ಟೆಲ್ಲ ಅಪಕಾರ ಮಾಡಿದ್ದಕ್ಕೆ ಅವರಿಗೆ ಹೆಚ್ಚು ಬೆಲೆಯನ್ನು ಜನರು ಕೊಡುವರು. ಇದು ಪ್ರಕೃತಿಯಲ್ಲಿಯೂ ವಿಜ್ಞಾನ — ಪ್ರಗತಿಗಳಲ್ಲಿಯೂ ಸ್ವೈರಾಚರಣೆಯಲ್ಲದೆ ಬೇರೇನು ? ಇದಕ್ಕೆ ಪ್ರತಿಯಾಗಿ ಪ್ರಕೃತಿ ನಮಗೆ ಕುರುಡುತನ, ಬೆಳವಣಿಗೆಯ ಹ್ರಾಸ, ಪ್ರಜೋತ್ಪಾದನಶಕ್ತಿಯ ನಾಶಗಳಿಂದ ಸೇಡುತೀರಿಸಿಕೊಂಡರೆ ಅದಕ್ಕೆ ನಾವು ಯೋಗ್ಯರೇ ಅಲ್ಲವೆ? ಇದೀಗ ನಗ್ನ ಔದ್ಯೋಗೀಕರಣ. ಬೆಲೆಬಾಳುವ ಜಾಹಿರಾತುಗಳ ಮೂಲಕ ಡಂಗುರ ಹೊಯ್ಯುತ್ತ ಪ್ರಚಾರಕ್ಕೆ ಬಂದು ಪಾಮರ ಜನರನ್ನು ಮೋಸಗೊಳಿಸಿ ವಿಜ್ಞಾನ, ಪ್ರಗತಿಯೆಂದು ಮೆರೆಯುವದು !

## ಯಂತ್ರಗಳೂ ಉಪಕರಣಗಳೂ

ಇದರಿಂದ ಯಂತ್ರಗಳಿಗೆ ಸ್ಥಾನವೇ ಇಲ್ಲವೆಂದು ಅರ್ಥವಾಗುವದಿಲ್ಲ. ಪ್ರಮಾಣಬದ್ಧ ಮತ್ತು ಪದ್ಧತಿಬದ್ಧ ಕ್ರಮದ ಅವಶ್ಯಕತೆಯಿರುವಲ್ಲಿ ಭಾರೀ ಯಂತ್ರಗಳ ಉಪಯೋಗ ಅಪೇಕ್ಷಣೀಯವಾಗುತ್ತದೆ. ಸೂಕ್ಷ್ಮ [illegible] ಉಪಕರಣಗಳ ತಯಾರಿ ಬೇಕಾದಲ್ಲಿಯೂ ಪ್ರಮಾಣಬದ್ಧ ವಸ್ತುಗಳು ಅತ್ಯವಶ್ಯಕವಾದಲ್ಲಿಯೂ ಅವುಗಳನ್ನು ಯಂತ್ರ ಮೂಲಕ ಉತ್ಪಾದನೆ ಮಾಡುವದೇ

—೧೧ನೇ ಪುಟಕ್ಕೆ

# ತಮ್ಮ ಶಾಂತಿ ರಾಯಭಾರದ ಬಗ್ಗೆ ಗಾಂಧೀಜಿಯವರ ವಿಚಾರಗಳೇನು?

(ಬಿಹಾರದ ಒಂದು ನಿರಾಶ್ರಿತರ ಶಿಬಿರದಲ್ಲಿ ಗಾಂಧೀಜಿಯವರು ಸೇರಿಸಿದ ಸಭೆಯ ಕಾರ್ಯಕಲಾಪಗಳು "ಸರ್ಚ ಲೈಟ" ಎಂಬ ಪಾಟಣಾ ಪತ್ರಿಕೆಯ ಮಾರ್ಚ ೩೦ ರ ಸಂಚಿಕೆಯಲ್ಲಿ ಪ್ರಕಟವಾಗಿದೆ. ನಿರಾಶ್ರಿತರ ಅನೇಕ ಬೇಡಿಕೆಗಳಿಗೆ ಅವರು ಕೊಟ್ಟ ಉತ್ತರಗಳನ್ನು ನೋಡಿದರೆ ಉಭಯ ಪಂಗಡಗಳಲ್ಲಿ ಶಾಂತಿ ಸೌಹಾರ್ದಗಳನ್ನು ಸ್ಥಾಪಿಸುವ ಪ್ರಶ್ನೆಯನ್ನು ಮಹಾತ್ಮರು ಯಾವ ರೀತಿ ಬಿಡಿಸುತ್ತಿರುವರೆಂಬದು ವ್ಯಕ್ತವಾಗುವದು.

ಮಹಾತ್ಮರ ಈ ಉತ್ತರಗಳ ಕಡೆಗೆ, ಶಾಂತಿ-ಸೌಹಾರ್ದಗಳ ಪ್ರಸ್ತಾವನೆಯನ್ನು ಧ್ಯೇಯವಾಗಿಟ್ಟುಕೊಂಡವರು ಬಹಳ ಲಕ್ಷ ಕೊಡಬೇಕು. —ಸಂ.)

"ನವಖಾಲಿಯ ಪರಿಸ್ಥಿತಿಯನ್ನು ನನ್ನ ಭಾಷಣಗಳಲ್ಲಿ ನಾನು ಸಾಧ್ಯವಾದಷ್ಟು ಎತ್ತಿಲ್ಲ. ನೌಖಾಲಿಯ ಬಗ್ಗೆ ಮಾತಾಡಲು ನನಗೆ ಅವಕಾಶ ದೊರೆತಾಗಲೆಲ್ಲ ನಾನು ಬಹು ಸಂಯಮನದಿಂದ ಮಾತಾಡಿರುವೆನು. ನೌಖಾಲಿಯ ಮುಸಲ್ಮಾನರ ಅತ್ಯಾಚಾರಗಳ ಬದಲು ಬಿಹಾರದ ಹಿಂದುಗಳ ಅತ್ಯಾಚಾರಗಳನ್ನು ಕುರಿತು ನಾನು ಮಾತಾಡಬೇಕೆಂದು ಇಲ್ಲಿಯ ಮುಸಲ್ಮಾನರು ಇಷ್ಟ ಪಡುತ್ತಿರುವರೊ? ನಾನು ಅದರಂತೆ ಮಾಡಿದರೆ ಹೇಡಿಯಾಗುವೆನು. ನನ್ನ ದೃಷ್ಟಿಯಲ್ಲಿ ನೌಖಾಲಿಯ ಮುಸಲ್ಮಾನರು ಹಾಗು ಬಿಹಾರದ ಹಿಂದುಗಳ ಅತ್ಯಾಚಾರಗಳು ಅಷ್ಟೇ ಭೀಕರವಾಗಿರುವವು. ಮತ್ತು ಅಷ್ಟೆ ಖಂಡನೀಯವಾಗಿರುವವು." ಎಂದು ಗಾಂಧೀಜಿಯವರು ಮುಸ್ಲಿಂ ನಿರಾಶ್ರಿತರ ಲಿಖಿತ ಮನವಿಗೆ ಉತ್ತರ ಕೊಡುತ್ತ ಹೇಳಿದರು.

ಗಾಂಧೀಜಿಯವರು ನೌಖಾಲಿಯ ಅತ್ಯಾಚಾರಗಳನ್ನು ವರ್ಣಿಸುತ್ತಿರುವದರಿಂದ ಇಲ್ಲಿಯ ಹಿಂದುಗಳ ದ್ವೇಷವು ಅಳಿಯುವದರ ಬದಲು ಇನ್ನೂ ಹೆಚ್ಚಾಗುತ್ತಿದೆಂದು ಆ ಮನವಿಯಲ್ಲಿ ಸೂಚಿಸಲಾಗಿತ್ತು. ತಮ್ಮನ್ನು ಶತ್ರುವೆಂದು ಕೆಲ ಸಮಯ ಮುಸಲ್ಮಾನರು ಭಾವಿಸುವದರಿಂದ ತಾವು ಅವರೊಡನೆ ಅತಿ ಸಂಯಮನದಿಂದ ಮಾತಾಡಬೇಕಾಗಿದೆಂದು ಗಾಂಧೀಜಿಯವರು ಹೇಳಿದರು. "ಪಂಜಾಬದಲ್ಲಿ ಎಲ್ಲಕ್ಕೂ ಮಿಗಿಲಾದ ಅತ್ಯಾಚಾರಗಳು ಸಂಭವಿಸಿರುತ್ತವೆ. ನಾನು ಮೊದ ಮೊದಲು ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಗಳನ್ನು ನಂಬಲಿಲ್ಲ. ಆದರೆ ವಿಚಾರಣೆ ನಡೆಸಿದ ನಂತರ ಪಂಜಾಬದಲ್ಲಿ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿದ್ದಕ್ಕಿಂತಲೂ ಹೆಚ್ಚು ತೀಕ್ಷ್ಣವಾದ ಅತ್ಯಾಚಾರಗಳು ನಡೆದಿವೆಂದು ನನಗೆ ಮನದಟ್ಟಾಯಿತು. ಈ ಅತ್ಯಾಚಾರಗಳಿಗೆ ಒಂದು ನಿರ್ದಿಷ್ಟ ಸಮಾಜದ ಜನರು ಕಾರಣರಾಗಿರುವದರಿಂದ ಆ ವಿಷಯವಾಗಿ ನಾನು ಮಾತಾಡಬಾರದೋ? ಇದನ್ನೆಲ್ಲ ನೋಡುತ್ತ ಕುಳಿತರೆ ನನ್ನ ರಾಯಭಾರವೆಂದಿಗೂ ಯಶಸ್ವಿಯಾಗುವದಿಲ್ಲ." ಎಂದರು.

ಸದ್ಯದ ಬಿಹಾರ ಮಂತ್ರಿ ಮಂಡಳದಲ್ಲಿ ತಮಗೆ ವಿಶ್ವಾಸವಿಲ್ಲೆಂಬ ಇನ್ನೊಂದು ಮನವಿಗೆ ಗಾಂಧೀಜಿಯವರು ಉತ್ತರ ಕೊಡುತ್ತ "ನೌಖಾಲಿಯ ಹಿಂದುಗಳ ವಿಷಯ ನಿಮಗೆ ಹೇಳಿರುವೆನು. ಅವರಾದರೂ ಬಂಗಾಲದ ಮುಖ್ಯ ಮಂತ್ರಿ ಶ್ರೀ ಶಹೀದ ಸುಹ್ರವರ್ದಿಯವರಲ್ಲಿ ತಮಗೆ ವಿಶ್ವಾಸವಿಲ್ಲೆಂದು ನನಗೆ ತಿಳಿಸಿದ್ದರು. ಶ್ರೀ ಶಹೀದರು ಭಿನ್ನ ಮತದಾರ ಸಂಘಗಳಿಂದ ಆರಿಸಿ ಬಂದಿರುವದರಿಂದ ಅವರನ್ನು ಮಂತ್ರಿ ಮಂಡಳದಿಂದ ಹೊರಗೆ ಹಾಕಲು ಬರುವದಿಲ್ಲೆಂದ್ಯ ನಾನು ಅಲ್ಲಿಯ ಹಿಂದುಗಳಿಗೆ ಉತ್ತರನಿತ್ತೆ. ಶಹೀದ ಸಾಹೇಬರು ಅವರ ಪಂಗಡದ ವಿಶ್ವಾಸಕ್ಕೆ ಪಾತ್ರರಾಗಿರುವ ವರೆಗೆ ಅವರನ್ನು ಯಾರೂ ಹೊರಗೆ ಹಾಕಲಾರರು. ಅದರಂತೆ ಹಿಂದುಗಳಿಂದ ಆರಿಸಲ್ಪಟ್ಟ ಇಲ್ಲಿಯ ಮಂತ್ರಿಗಳನ್ನು ನೀವು ಹೇಗೆ ಹೊರಗೆ ಹಾಕಬಲ್ಲಿರಿ? ಜಾತೀಯ ಮತದಾರ ಸಂಘಗಳಿರುವದರಿಂದಲೆ ಇಂಥ ದುರ್ದೈವಿ ಪರಿಸ್ಥಿತಿಯು ಉಂಟಾಗಿದೆ. ಈ ಮತದಾರ ಪದ್ಧತಿಗಳನ್ನು ಮೊದಲಿನಿಂದಲೂ ನಾನು ಖಂಡಿಸುತ್ತಿರುವದು ನಿಮಗೆ ಗೊತ್ತಿರಲಿಕ್ಕೆ ಸಾಕು. ಡಾ. ಖಾನ ಸಾಹೇಬರು ಇತ್ತೀಚೆಗೆ ಇದೇ ಹೇಳಿರುವರು. ತಾವು ಪಠಾಣರ ಪ್ರತಿನಿಧಿಗಳಾಗಿರುವದರಿಂದ ಅವರ ವಿಶ್ವಾಸಕ್ಕೆ ಪಾತ್ರರಾಗಿರುವ ವರೆಗೆ ರಾಜೀನಾಮೆಯ ಪ್ರಶ್ನೆಯೆ ಉದ್ಭವಿಸುವದಿ ಅವರು ನುಡಿದಿರುವರು. ಒಂದು ವೇಳೆ ಮಂತ್ರಿ ಮಂಡಳ ಹೋದರೂ ಆಗುವದಾದರೇನು? ಅವರ ಸ್ಥಳಕ್ಕೆ ಪುನಃ ನಿರಂಕುಶ ಸರಕಾರವೊಂದು ಬರುವದು. ಅದು ಒತ್ತಟ್ಟಿಗಿರಲಿ. ಈ ಮಂತ್ರಿಗಳೊಡನೆ ನನ್ನ ಸ್ನೇಹ ಸಂಬಂಧವಿರುವದರಿಂದ ಅವರಿಂದ ಒಳ್ಳೆ ಕಾರ್ಯವನ್ನು ನಾನು ಮಾಡಿಸಬಲ್ಲೆ" ಎಂದರು.

ಹೊಸ ಠಾಣೆಗಳಲ್ಲಿ ನೂರಕ್ಕೆ ೫೦ ರಷ್ಟು ಅಧಿಕಾರಿಗಳು ಹಾಗು ಪೋಲೀಸ ಸಿಪಾಯರು ಮುಸಲ್ಮಾನರಿರಬೇಕೆಂಬ ಬೇಡಿಕೆಗೆ ಗಾಂಧೀಜಿಯವರು ಉತ್ತರ ಕೊಡುತ್ತ "ನೌಖಾಲಿಯ ಹಿಂದುಗಳು ಇದೇ ತರದ ಬೇಡಿಕೆಯನ್ನು ನನ್ನ ಮುಂದಿಟ್ಟಿದ್ದರು. ಇದಕ್ಕೆ ನಾನು ಸಮ್ಮತಿಸಲಿಲ್ಲ. ಇಂಥ ಬೇಡಿಕೆಯು ನನ್ನ ಶಾಂತಿ ರಾಯಭಾರಕ್ಕೆ ಅಡ್ಡ ಬರುವದು. ಈ ನಿಮ್ಮ ಬೇಡಿಕೆಯನ್ನು ಮನ್ನಿಸಿದರೆ ಬಿಹಾರವನ್ನು ತುಂಡು ತುಂಡಾಗಿ ವಿಭಾಗಿಸಿ ಅನೇಕ ಚಿಕ್ಕ ಪಾಕಿಸ್ತಾನಗಳನ್ನು ರಚಿಸಲು ಮನ್ನಣೆ ಕೊಟ್ಟಂತಾಗುವದು. ನೀವು ಎಲ್ಲಿಯೇ ಇದ್ದರೂ ನಿಮ್ಮ ನೆರೆಹೊರೆಯವರೊಡನೆ ಪರಸ್ಪರ ಸೌಹಾರ್ದ ಹಾಗು ಮೈತ್ರಿಯನ್ನು ಬೆಳೆಸಿಕೊಂಡಿರಬೇಕಾಗುತ್ತದೆ. ಪಾಕಿಸ್ತಾನ ಪ್ರದೇಶಗಳಲ್ಲಾದರೂ ಬಹುಸಂಖ್ಯಾಕರು ಅಲ್ಪ ಸಂಖ್ಯಾಕರ ವಿಶ್ವಾಸವನ್ನು ಗಳಿಸಬೇಕೆಂದು ಕಾಯದೆ ಆಜಮರು ಹಿಂದೊಮ್ಮೆ ಹೇಳಿರುವರು. ಅದರಂತೆ ನಿಮ್ಮ ವಿಶ್ವಾಸವನ್ನು ಗಳಿಸಲು ಇಲ್ಲಿಯ ಹಿಂದುಗಳಿಗೆ ನಾನು ಬಿನ್ನವಿಸುತಿದ್ದೇನೆ. ಹಿಂದುಸ್ತಾನ-ಪಾಕಿಸ್ತಾನಗಳಲ್ಲಿ ಯಾವದಾದರೊಂದು ರಚಿಸಲ್ಪಟ್ಟರೂ ಅದಕ್ಕೆ ನ್ಯಾಯ ಮತ್ತು ಸಮತೆಯು ತಳಹದಿಯಾಗಿರಬೇಕು" ಎಂದರು.

ಕೆಲ ಪ್ರತ್ಯೇಕ ಸ್ಥಳಗಳಲ್ಲಿ ಪುನಃ ನೆಲೆಸಲು ಮುಸಲ್ಮಾನರಿಗೆ ಅನುಮತಿ ಕೊಡಬೇಕೆಂಬ ಇನ್ನೊಂದು ಬೇಡಿಕೆಯ ಕಡೆಗೆ ಗಾಂಧೀಜಿಯವರು ಹೊರಳಿ "ನಿರ್ದಿಷ್ಟ ಪ್ರತ್ಯೇಕ ಸ್ಥಳಗಳಲ್ಲಿ ನಿಮ್ಮನ್ನು ಇರಿಸಲು ಸರಕಾರವನ್ನು ನೀವು ಒತ್ತಾಯಪಡಿಸಲಾರಿರಿ. ನೌಖಾಲಿಯ ಹಿಂದುಗಳ ವಿಷಯದಲ್ಲಿ ನಾನು ಈ ರೀತಿ ಶಹೀದ ಸಾಹೇಬರಿಗೆ ಹೇಳಬಲ್ಲೆನೊ? ಇಂಥ ಮಾರ್ಗವನ್ನನುಸರಿಸಲು ನೌಖಾಲಿಯ ಹಿಂದುಗಳನ್ನು ನಾನೆಂದಿಗೂ ಪ್ರೋತ್ಸಾಹಿಸಿಲ್ಲ. ತಮಗೆ ಹೆದರಿಕೆಯಾದರೆ ಪರಿಹಾರ ದ್ರವ್ಯ ಸಿಕ್ಕಬಳಿಕ ಬೇಕಾದ ಸ್ಥಳಕ್ಕೆ ಹೊರಟು ಹೋಗಲು ಅಲ್ಲಿಯ ಹಿಂದುಗಳಿಗೆ ನಾನು ತಿಳಿಸಿರುವೆನು. ಅವರಿಗೆ ಅಸ್ತಿಯಿರುವಾಗ ಸರಕಾರವು ಅವರಿಗೆ ಪರಿಹಾರ ಧನವನ್ನೇಕೆ ಕೊಡುವದಿಲ್ಲ! ಅದರಂತೆ ನಿಮಗೆ ಸಾಕಷ್ಟು ಪರಿಹಾರ ದೊರೆತರೆ ನೀವಾದರೂ ಬೇಕಾದಲ್ಲಿಗೆ ತೆರಳಬಹುದು. ಆದರೆ ನನ್ನ ಅಪೇಕ್ಷೆಯು ಬೇರೆ ಇದೆ. ಇಂಥ ಸ್ಥಿತಿಯಲ್ಲಿ ನಿಮ್ಮ ಮನೆಮಾರುಗಳನ್ನು ಬಿಟ್ಟು ಹೋಗುವದು ಹೇಡಿತನ. ಪರಿಹಾರವನ್ನು ಕೊಡಲು ಹಿಂಜರಿಯುವದು ಸರಕಾರಕ್ಕೆ ಭೂಷಣವಲ್ಲ. ಈ ಸರಕಾರವಾದರೂ ಹಾಗೆ ಮಾಡುವದೆಂದು ನನಗನಿಸುವದಿಲ್ಲ. ಹಿಂದುಗಳ ಮತದಿಂದ ಆರಿಸಿ ಬಂದಿರುವ ಮಂತ್ರಿಗಳೇ ಹಿಂದುಗಳು ತಮ್ಮ ಆಂಕೆ ಮೀರಿ ನಡೆದುಕೊಂಡಿರುವದೆಂದು ಹೇಳ ಹತ್ತಿದರೆ ಅವರು ಅಧಿಕಾರದಲ್ಲುಳಿಯುವದಕ್ಕಿಂತಲೂ ಹಿಂದುಗಳ ಕೋಪಾಗ್ನಿಯಲ್ಲಿ ಹಾರಿಕೊಳ್ಳುವದು ಒಳಿತು. ಸರಕಾರವು ಅನ್ಯಾಯವನ್ನು ಕೊನೆಯ ವರೆಗೂ ಎಸಗಲಾರದು. ಅದು ನ್ಯಾಯ ಪರಿಪಾಲನೆ ಮಾಡಲೇಬೇಕಾಗುವದು" ಎಂದರು.

ಬಿಹಾರ ಗಲಭೆಯ ವಿಚಾರಣೆ ನಡೆಸಲು ನ್ಯಾ. ಮೂ. ರುಬೇನರು ನೇಮಕ ಹೊಂದಿರುವ ಬಗ್ಗೆ ಮುಸಲ್ಮಾನರು ಎತ್ತಿದ ಆಕ್ಷೇಪದ ಕಡೆಗೆ ಗಾಂಧೀಜಿಯವರು ತಿರುಗಿ ಇಂತೆಂದರು. ಶ್ರೀ ರುಬೇನರಲ್ಲಿ ಮುಸಲ್ಮಾನರಿಗೆ ವಿಶ್ವಾಸವಿಲ್ಲೆಂದು ಈ ಮನವಿಯಲ್ಲಿ ಹೇಳಲಾಗಿದೆ. ಆದರೆ ನಿಮಗೆ ಯಾರು ಬೇಕೆಂಬದನ್ನು ನೀವು ಹೇಳಿಲ್ಲ. ಶ್ರೀ ರುಬೇನರು ಮುಸ್ಲಿಮೇತರರಾಗಿರುವದರಿಂದ ಅವರಲ್ಲಿ ನಾವು ವಿಶ್ವಾಸವಿಡಬೇಕು. ಒಬ್ಬನೇ ಸದಸ್ಯನಿರುವ ಈ ವಿಚಾರಣಾ ಸಮಿತಿಯಿಂದ ಏನೂ ಗಂಡಾಂತರವಿಲ್ಲ. ಬೇಕಾದರೆ ಮುಸಲ್ಮಾನರು ಹೆಸರುಗಳ ಯಾದಿಯನ್ನು ಒಪ್ಪಿಸಬಹುದು. ನಂತರ ಅದನ್ನು ನಾನು ಸರಕಾರಕ್ಕೆ ತಿಳಿಸುವೆನು" ಎಂದರು.

ಅಪಹೃತ ಸ್ತ್ರೀಯರನ್ನು ಹಿಂದಕೊಪ್ಪಿಸಬೇಕೆಂಬ ಬೇಡಿಕೆಯ ಬಗ್ಗೆ ಗಾಂಧೀಜಿಯವರು "ಬಿಹಾರಕ್ಕೆ ಬಂದಾಗಿನಿಂದ ನಾನು, ಅಪಹೃತ ಸ್ತ್ರೀಯರ ಹೆಸರುಗಳನ್ನೂ ಅವರು ತಮಗೆ ಹೇಗೆ ಸಂಬಂಧಿಕರಾಗಬೇಕೆಂಬದನ್ನೂ ನನಗೆ ತಿಳಿಸಲು, ನನ್ನ ಬಳಿ ಬಂದ ಮುಸಲ್ಮಾನರಿಗೆಲ್ಲ ಹೇಳುತ್ತಿರುವೆನು. ಈ ವಿವರಗಳು ನನ್ನ ಕೈಸೇರಿದರೆ ಅವರು ಜೀವಂತ ಇರುವರೊ ಇಲ್ಲವೊ ಎಂಬದನ್ನು ತಿಳಿದುಕೊಳ್ಳಲು ನನಗೆ ಸುಲಭವಾಗುವದು. ಆದರೆ ಇದುವರೆಗೂ ಒಬ್ಬನೂ ಒಂದು ಹೆಸರನ್ನೂ ನನಗೆ ಒಪ್ಪಿಸಿಲ್ಲ. ಈ ಅಭಾಗ್ಯ ಬಾಲಿಕೆಯರ ಹೆಸರುಗಳನ್ನೊಪ್ಪಿಸಲು ನಿಮ್ಮನ್ನು ನಾನು ಈಗ ಪುನಃ ಕೇಳಿಕೊಳ್ಳುವೆ" ಎಂದರು.

ನಿರಾಶ್ರಿತರ ಶಿಬಿರದಲ್ಲಿ ನಡೆದ ಈ ಸಭೆಯಲ್ಲಿ ಮಹಂತ ಭಾಗವತದಾಸ ಎಂ. ಎಲ್. ಎ. ಅವರು ಹಾಜರಿದ್ದರು. ಹಿಂದುಗಳನ್ನು ಗಲಭೆಗೆ ಪ್ರಚೋದಿಸಿದರೆಂದು ಮುಸಲ್ಮಾನರು ಇವರ ಮೇಲೆ ಆರೋಪ ಹೊರಿಸಿದ್ದರು. ಭಾಗವತದಾಸರು ಎದ್ದು ನಿಂತು ತಾವು ನಿರ್ದೋಷಿಗಳೆಂದು ಗಾಂಧೀಜಿಯವರಿಗೆ ತಿಳಿಸಿದರಲ್ಲದೆ ತಮ್ಮ ಮೇಲಿನ ಆರೋಪಗಳ ಬಗ್ಗೆ ಒಂದೇ ನಿರ್ದಿಷ್ಟ ಉದಾಹರಣೆಯನ್ನು ಕೊಡಲು ಮುಸಲ್ಮಾನರಿಗೆ ಕೇಳಿಕೊಂಡರು. ಗಾಂಧೀಜಿಯವರಿಗೆ ಅತ್ಯಂತ ಸಮಾಧಾನವಾಗುವಂತೆ ಅವರು "ಗಾಂಧೀಜಿ ಯಾವದೇ ವಿಚಾರಣೆಯನ್ನು ಎದುರಿಸಲು ಸಿದ್ಧನಿರುವೆನು. ಬೇಕಾದರೆ ಮುಸಲ್ಮಾನರೇ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿ ಗಲಭೆ ಕಾಲದ ನನ್ನ ವರ್ತನೆಯನ್ನು ನಿರ್ಣಯಿಸಲಿ. ನನ್ನ ಮೇಲೆ ಆರೋಪ ಹೊರಿಸುವವರಲ್ಲಿ ನನಗೆ ಪೂರ್ಣ ವಿಶ್ವಾಸವಿದೆ. ಅವರೇ ನನ್ನ ವಿಚಾರಣೆ ಮಾಡಲಿ" ಎಂದರು.

## ಪುಂಡರನ್ನೆದುರಿಸಿದ ಮುಸ್ಲಿಂ ಧೀರ

### ಏಕಾಕಿಯಾಗಿ ಹಿಂದುಗಳನ್ನು ರಕ್ಷಿಸಿದ

ಕಾಲಾರಾ ಬಳಿಯಲ್ಲಿಯ ಅರಾಖು ಬ್ರಹ್ಮನ ಎಂಬ ಹಿಂದೂ ಬಹುಸಂಖ್ಯಾಕ ಹಳ್ಳಿಯು ಇತ್ತೀಚಿನ ಜಾತೀಯ ಗಲಭೆಗಳಲ್ಲಿ ಜಿಲ್ಲಾ ಬೋರ್ಡಿನ ಸಭಾಸದರಾದ ಚೌಧರಿ ಜಮನಖಾನರ ಪ್ರಯತ್ನದ ಫಲವಾಗಿ ಗಲಭೆಯಿಂದ ಉಳಿದದ್ದು ತಿಳಿದುಬರುತ್ತದೆ.

ಅವರು ಹಳ್ಳಿಯಲ್ಲಿಯ ಸೀಖ ಹಾಗು ಹಿಂದುಗಳ ಸಂರಕ್ಷಣೆಯ ಭಾರವನ್ನು ಹೊತ್ತು ಕೊಂಡು ಅವರನ್ನೆಲ್ಲ ತಮ್ಮ ಮನೆಗೆ ಕರೆದುಕೊಂಡು ಬಂದು ಬಾಗಿಲದಲ್ಲಿ ಬಂದೂಕ ಸಹಿತ ಒಬ್ಬನನ್ನು ಬಾಗಿಲ ತೆಗೆಯ ಬಾರದೆಂದು ಹೇಳಿ ನಿಲ್ಲಿಸಿ ದಾಳಿಗಾರರನ್ನು ಎದುರಿಸಲು ತಾವು ಸ್ವಲ್ಪ ದೂರದಲ್ಲಿ ಬಂದೂಕ ಸಹಿತ ನಿಂತುಕೊಂಡರು.

ದಾಳಿಗಾರರು ಮೂರು ಸಲ ಏರಿಬಂದರೂ ತಮ್ಮನ್ನು ಕೊಂದ ಹೊರತು ಮನೆಯಲ್ಲಿ ಕಾಲಿಡುವದು ಶಕ್ಯವಿಲ್ಲೆಂದು ಜಮನಖಾನರು ಅವರನ್ನು ಪ್ರತಿಭಟಿಸಿ ಹಿಂದಟ್ಟಿದರು. ಮೂರು ದಿವಸ ಈ ರೀತಿ ನಡೆದ ಮೇಲೆ ಚೌಧರಿ ಜಮನಖಾನರು ನಿರಾಶ್ರಿತರನ್ನು ಗಂಡಾಂತರ ಪ್ರದೇಶದಿಂದ ಸುರಕ್ಷಿತ ಸ್ಥಳಕ್ಕೆ ಕಳಿಸಿದರು.

ಜಿಲ್ಲಾ ಕಾಂಗ್ರೆಸ ಕಮೀಟಿ ಕಾರ್ಯದರ್ಶಿಗಳಾದ ಬಿಶನದಾಸ ಭಾಟಿಯಾ ಅವರು ಒಂದು ಪ್ರಕಟನೆ ಹೊರಡಿಸಿ ಚೌಧರಿ ಜಮನಖಾನರು ತಮ್ಮ ಮತದಾರ ಸಂಘದ ನಿಜವಾದ ಸೇವೆ ಮಾಡಿದ ಬಗ್ಗೆ ಅವರನ್ನು ಅಭಿನಂದಿಸಿದ್ದಾರೆ.

---

## ಕುಲ: ಮಾನವ

[ಈ ಕೆಳಗಿನದನ್ನು ಅಮೇರಿಕೆಯ "ಅಮೇರಿಕನ್ ಯೂನಿಟಿ" (ನವೆಂಬರ ೧೯೪೪) ಯೆಂಬ ಪತ್ರಿಕೆಯಿಂದೆತ್ತಲಾಗಿದೆ. ಈ ಪತ್ರಿಕೆ ಅಮೇರಿಕೆಯ ಅಸಹಿಷ್ಣುತಾ ನಿರೋಧಕ ಮಂಡಲದಿಂದ ನಡೆಸಲ್ಪಡುತಿದೆ. —ವಿ. ಜಿ. ಡಿ]

ಝೆಕೊಸ್ಲೊವಾಕಿಯಾದ ಉಪ ಪ್ರಧಾನ ಮಂತ್ರಿಯಾದ ಜಾನ ಮಸಾರಿಕರು ಅಮೇರಿಕೆಯಲ್ಲಿ ಪ್ರವೇಶ ಪಡೆಯಬೇಕಾದರೆ, ನ್ಯೂಯಾರ್ಕಿನಲ್ಲಿ ವಾಡಿಕೆಯಂತೆ ವಲಸೆಯ ನಿಯಮಗಳನ್ವಯ ಒಂದು ನಮೂನೆಯಲ್ಲಿ ತಮ್ಮ ಹೆಸರು, ಜನ್ಮಸ್ಥಾನ, ವಯಸ್ಸು ಮೊದಲಾದವುಗಳನ್ನು ತುಂಬಿ ಕೊಡಬೇಕಾಯಿತು.

ಮಸಾರಿಕರು ನಮೂನೆಯಲ್ಲಿದ್ದ ಕುಲ, ಎಂಬ ವಿಷಯಕ್ಕೆ ಬಂದಾಗ ತುಸು ಆಲೋಚಿಸಿ ಆ ಮೇಲೆ ಬರಿ "ಮಾನವ" ಎಂದಿಷ್ಟೇ ಬರೆದರು.

ಆಗ ವಲಸೆ ಅಧಿಕಾರಿ ನಿಷೇಧಿಸಿದನು: "ಆದರೆ ಮಿ. ಮಸಾರಿಕ್, ಅದರ ಅರ್ಥ ಹಾಗಲ್ಲ. ನೀವು 'ಝೆಕೋಸ್ಲೊವಾಕಿಯನ್' ಎಂದೇಕೆ ತುಂಬಬಾರದು?"

"ಝೆಕೊಸ್ಲೋವಾಕಿಯನ್ನರೊಂದು ಕುಲವಲ್ಲ," ಮಸಾರಿಕರ ಉತ್ತರ ಬಂತು. "ಅವರಲ್ಲಿ ಝೆಕ್ಕರು, ಸ್ಲೊವಾಕರು ಮತ್ತು ಬೇರೆಷ್ಟೋ ಜನಾಂಗದವರು ಇದ್ದಾರೆ. ನಾನು ಝೆಕೊಸ್ಲೊವಾಕಿಯನ್ ರಾಷ್ಟ್ರೀಯನೇನೋ ಸರಿ, ಆದರೆ ನಾನು ಮಾನವ ಕುಲಕ್ಕೇ ಸೇರಿದವನು."

---

## ಹೆಸರು

[ಈಚೆಗೆ ಪ್ರಕಟವಾದ ತಮ್ಮ ಇಂಗ್ಲೀಷ ಪುಸ್ತಿಕೆ*ಯ ಹೆಸರನ್ನು ವಿವರಿಸುವ ಈ ಕೆಳಗಿನ ಟಿಪ್ಪಣಿಯನ್ನು ಪ್ರೊ. ಕುಮಾರಪ್ಪನವರು ಕಳಿಸಿದ್ದಾರೆ. ಇದು ನಮ್ಮ ಓದುಗರಿಗೆ ರುಚಿಸದಿರದು. —ಸಂ.]

ಲಾರ್ಡ ಕ್ಲೈವನು ಸಾಮಾನ್ಯವಾಗಿ ಹಿಂದುಸ್ತಾನದಲ್ಲಿ ಬ್ರಿಟಿಶ ಸಾಮ್ರಾಜ್ಯದ ಸಂಸ್ಥಾಪಕನೆಂದು ಪ್ರಸಿದ್ಧನಾಗಿದ್ದಾನೆ.

ರಾಬರ್ಟ ಕ್ಲೈವನು (೧೭೨೫—೭೪) ಹುಡುಗನಾಗಿದ್ದಾಗ ಶಿಕ್ಷಕರು ಅವನ ಆಸೆ ಬಿಟ್ಟಿದ್ದರು. ೧೮ ನೇ ವಯಸ್ಸಿನಲ್ಲಿ ಅವನನ್ನು ಹಿಂದುಸ್ತಾನಕ್ಕೆ ಈಸ್ಟ ಇಂಡಿಯಾ ಕಂಪನಿಯಲ್ಲಿ "ಕಾರಕೂನ"ನಾಗಿ ಕಳಿಸಲಾಯಿತು. ೩೫ ನೇ ವಯಸ್ಸಿನಲ್ಲಿ ಅವನು ಇಂಗ್ಲಂಡಿಗೆ ಮರಳಿದಾಗ ೩೦೦,೦೦೦ ಪೌಂಡಿನ ಸಂಪತ್ತಿಯನ್ನು ೨೭೦೦೦ ಪೌಂಡ ವಾರ್ಷಿಕ ವಿರಾಮ ವರಮಾನವನ್ನೂ ಸಂಪಾದಿಸಿದ್ದನು. ಈ ಸುಲಿಗೆಗಾರ ಮುತ್ಸದ್ದಿ ಹಾಕಿಕೊಟ್ಟ ಸಾರ್ವಜನಿಕ ಹಣಕಾಸಿನ ಮತ್ತು ಪ್ರಾಮಾಣಿಕತೆಯ ತತ್ವಗಳೇ ಇಂದಿಗೂ ಹಿಂದುಸ್ತಾನ ಸರಕಾರಕ್ಕೆ ಆದರ್ಶವಾಗಿವೆ.

ಲಾರ್ಡ ಕೇನ್ಸನ – ವಿಚಾರಗಳಿಂದ ಈ ಶತಮಾನದ ಆರಂಭದಿಂದಲೂ ಬ್ರಿಟಿಶರ ಅಂತರ್‍ರಾಷ್ಟ್ರೀಯ ಮತ್ತು ಅಂತರಿಕ ಹಣಕಾಸಿನ ಧೋರಣೆ ಗ್ರಸ್ತವಾಗಿದೆ.

ಜಾನ್ ಮೇನಾರ್ಡ ಕೇನ್ಸನು (೧೮೮೩—೧೯೪೬) ಬ್ರಿಟಿಶ ಸಂಧಿ ಒಡಂಬಡಿಕೆ, ಪರಿಹಾರ ಬೇಡಿಕೆ, ಯುದ್ಧ ಸಾಲದ ಸಲುವಳಿ, ಗ್ರೇಟ ಬ್ರಿಟನ್ನಿನಲ್ಲಿಯ ವ್ಯತಿಪ್ರಸರಣ, ಧೋರಣೆ ಇವೆಲ್ಲವುಗಳಲ್ಲಿ ಕೈವಾಡವಾ ತೋರಿಸಿದನು. ಬ್ರಿಟನ ವುಡ್ಸ ಸಮ್ಮೇಲನದ ನಿಯಾಮಕ ಶಕ್ತಿಯೂ ಅವನೇ ಆಗಿದ್ದನು. ಬ್ರಿಟಿಶ ಹಿಂದೀ ಹಣಕಾಸಿನ ಧೋರಣದ ಮೇಲೂ ಅವನಿಗಿದ್ದ ಪ್ರಭಾವ ಅಷ್ಟಿಷ್ಟಲ್ಲ. ಸುಮಾರು ೩೪ ವರ್ಷಗಳ ಹಿಂದೆ ಅವನ "ಹಿಂದೀ ಚಲನವೂ ಹಣಕಾಸೂ" ಪುಸ್ತಕದೊಡನೆ ಅದು ಪ್ರಾರಂಭವಾಯಿತು.

ಲಾರ್ಡ ಕ್ಲೈವನು ಈ ವಂಶದ ಮೊದಲಿಗನಾಗಿದ್ದಂತೆ ಲಾರ್ಡ ಕೇನ್ಸನು ಕೊನೆಯವನಾಗಲೆಂದು ಹಾರೈಸೋಣ.

* ಕ್ಲೈವನಿಂದ ಕೇನ್ಸವರೆಗೆ (ನಮ್ಮ ಸರಕಾರಿ ಸಾಲ ಮತ್ತು ಪತ್ರಗಳ ಸಂಕ್ಷಿಪ್ತ ಸಿಂಹಾವಲೋಕನ) [ Clive to Keynes ] ಲೇ: ಜೆ. ಸಿ. ಕುಮಾರಪ್ಪ ನವಜೀವನ ಪ್ರಕಟನಾಲಯ, ಅಹಮದಾಬಾದ ಬೆಲೆ: ಹನ್ನೆರಡಾಣೆ.

---

ಮುಂಬೈ ಶಾಸನ ಸಭೆ

## ಒಕ್ಕಲಿಗರ ಋಣ ಪರಿಹಾರ ಮಸೂದೆಯ ಸ್ವೀಕಾರ

### ಮಾರಾಟೆಕರ ತಿದ್ದುಪಡಿ ಮಸೂದೆಯ ಮಂಡನ

ಮುಂಬಯಿ ಶಾಸನ ಸಭೆಯಲ್ಲಿ ತಾ. ೯ ಕ್ಕೆ ಒಕ್ಕಲಿಗರ ಋಣ ಪರಿಹಾರ ಮಸೂದೆಯ ಮೂರನೇ ವಾಚನವು ಸರ್ವಾನುಮತದಿಂದ ಸ್ವೀಕೃತವಾಯಿತು. ೭೩ ತಿದ್ದುಪಡಿಗಳಲ್ಲಿ ೭ ಸಾಮಾನ್ಯವಾಗಿ ಉಳಿದವು. ನಿರಾಕರಿಸಲ್ಪಟ್ಟವು ಇಲ್ಲವೆ ಹಿಂತೆಗೆದುಕೊಳ್ಳಲ್ಪಟ್ಟವು. ಜಾನೇವರಿ ೧೯೪೬ ರ ವರೆಗಿನ ಎಲ್ಲ ಸಾಲಗಳನ್ನು ಒಳಗೊಳ್ಳಲು ಡಾಂಗೆಯವರು ತಂದ ತಿದ್ದುಪಡಿಯೂ ನಿರಾಕೃತವಾಯಿತು. ಡಾ. ಅಂತ್ರೋಳಿಕರ, ಬಾಬುಭಾಯಿ ಪಟೇಲ, ಮೋರೆ ಮೊದಲಾದವರು ಭಾಷಣ ಮಾಡಿ ಮಸೂದೆಯನ್ನು ಪ್ರಶಂಸಿಸಿದರು. ಅರ್ಥಸಚಿವರು ಚರ್ಚೆಗೆ ಉತ್ತರ ಕೊಡುತ್ತ ಒಕ್ಕಲಿಗರ ಬಡತನ ನಿವಾರಿಸುವಲ್ಲಿ ಇದೊಂದು ಹೆಜ್ಜೆಯಾಗಿದೆಂದೂ ರೈತರಿಗೆ ಸೋಯಿ ದರದಲ್ಲಿ ಹಣ ಒದಗಿಸುವ ವಿಚಾರಮಾಡಲು ಮಣಿಲಾಲ ನಾನಾವಟಿಯವರ ಅಧ್ಯಕ್ಷತೆಯಲ್ಲಿ ಮಂಡಳ ನಿಯಮಿಸಿದ್ದಲ್ಲದೆ ಹಿಂದುಸ್ತಾನ ಸರಕಾರದವರು ಒಕ್ಕಲತನ ಹುಟ್ಟುವಳಿಗಳ ಧಾರಣೆಗಳನ್ನು ಸ್ಥಿರಪಡಿಸುವ ವಿಚಾರ ಮಾಡಲು ಕಮೀಟಿ ನೇಮಿಸಿದ್ದು ಸರಕಾರವು ಅದರ ಸೂಚನೆಗಳನ್ನು ಜಾರಿಯಲ್ಲಿ ತರಲಿರುವದೆಂದೂ ತಿಳಿಸಿದರು.

ಅನಂತರ ಅರ್ಥಸಚಿವರು ಮುಂಬಯಿ ಮಾರಾಟೆಕರ ತಿದ್ದುಪಡಿ ಮಸೂದೆಯನ್ನು ಪ್ರಥಮ ವಾಚನಕ್ಕಾಗಿ ಮಂಡಿಸಿದ ಮೇಲೆ ಸಭೆಯು ಮರುದಿನಕ್ಕೆ ಮುಂದರಿಯಿತು.

ಸರಕಾರದಿಂದ ಪ್ರೊ. ಗಾಡಗೀಳರ ಅಧ್ಯಕ್ಷತೆಯಲ್ಲಿ ನೇಮಕವಾದ ಸಮಿತಿಯವರ ವರದಿ ಪ್ರಕಾರ ಮಾರಾಟೆಕರ ಮಸೂದೆಯಲ್ಲಿ ತಿದ್ದುಪಡಿ ಮಾಡಲಾಗಿದ್ದು ಕಾಂಟ್ರ್ಯಾಕ್ಟರರ ವ್ಯವಹಾರಗಳಲ್ಲಿ ಯಾವುದು ಕರಕೊಳ್ಳಗಾಗುವದೆಂಬದನ್ನು ಸ್ಪಷ್ಟಮಾಡಲಾಗಿರುವದು. ಮತ್ತು ಖಾನಾವಳಿಗಳಲ್ಲಿಯ ೮ ಆಣೆಗಿಂತ ಕಡಿಮೆ ದರದ ಊಟಗಳನ್ನು ಕರದಿಂದ ಹೊರಪಡಿಸಲಾಗಿರುವದು.

## ಬಿಹಾರ ಯಾತ್ರೆ

(೯ ನೇ ಪುಟದಿಂದ)

ಅಲ್ಲಾಗಂಜ ಹಳ್ಳಿಗಳನ್ನು ಸಂದರ್ಶಿಸಿದರು. ಈ ಹಳ್ಳಿಗಳಲ್ಲಿ ಮುಸ್ಲಿಂರು ಬಹಳ ಹಾನಿಗೊಂಡಿದ್ದಾರೆ.

ಈ ಹಳ್ಳಿಗಳಿಗೆ ತಾವು ಭೆಟ್ಟಿಕೊಟ್ಟದ್ದನ್ನು ಗಾಂಧೀಜಿಯವರು ಉಲ್ಲೇಖಿಸಿ ಜನರಿಗೆ ತಾವು ತಿಳಿಸಿ ಅವರ ಗಮನ ಸೆಳೆಯಬೇಕಾದ ಸಂಗತಿಗಳು ತಮ್ಮಲ್ಲಿ ತುಂಬಿವೆಯೆಂದು ಹೇಳಿದರು. ಮುಸ್ಲಿಂರಲ್ಲಿ ವಿಶ್ವಾಸ ಹುಟ್ಟಿಸುವಷ್ಟು ಹಿಂದುಗಳ ಪಶ್ಚಾತ್ತಾಪವು ಕಳಕಳಿಯುಳ್ಳದಾಗಿಲ್ಲೆಂದೂ ತಮಗೆ ಖೇದವಾಗಿದೆಂದರು. ಮುಸ್ಲಿಂರಲ್ಲಿಯ ಅವಿಶ್ವಾಸವನ್ನು ಹೋಗಲಾಡಿಸಬೇಕು ಎಂದು ಗಾಂಧೀಜಿ ಅಂದು ಮಧ್ಯಾಹ್ನದ ಸಭೆಯಲ್ಲಿ ಹೇಳಿದರು. ಆದರೆ ಆ ಅಶ್ವಾಸನವನ್ನು ಕೊಡಲು ಒಬ್ಬ ಹಿಂದುವೂ ಎದ್ದು ಮುಂದಕ್ಕೆ ಬರಲಿಲ್ಲ. ಆದ್ದರಿಂದ ಮುಸ್ಲಿಂರು ತಮ್ಮ ಆತ್ಮಶುದ್ಧಿ ಮಾಡಿಕೊಂಡಿರುವರೋ ಎಂದು ಕೇಳಲಿಕ್ಕೆ ತಮಗೆ ಅಧಿಕಾರವಿಲ್ಲೆಂದರು. ಬಿಹಾರದಲ್ಲಿ ಮುಸ್ಲಿಂರು ನೊಂದ ಪಕ್ಷದವರಾಗಿದ್ದು ಹಿಂದುಗಳು ತಮ್ಮ ಅಪರಾಧಕ್ಕಾಗಿ ನೈಜಪಶ್ಚಾತ್ತಾಪವನ್ನು ತೋರದೆ ಅವರಿಂದ ಸಮಾಧಾನಕರವಾದ ಉತ್ತರವನ್ನು ಅಪೇಕ್ಷಿಸಲು ಯಾರಿಗೂ ಅಧಿಕಾರವಿಲ್ಲೆಂದರು. ಮಥುರಾ ಸಿಂಗನಂಥ ಪುಂಡನಾಯಕರು ಇನ್ನೂ ತಲೆತಪ್ಪಿಸಿಕೊಂಡು ಅಲೆಯುತ್ತಿದ್ದಾರೆ. ಆದ್ದರಿಂದ ಮುಸ್ಲಿಮರು ಸ್ವಗ್ರಾಮಗಳಿಗೆ ಹಿಂತಿರುಗಲು ಹೆದರಿದರೆ ಅದರಲ್ಲಿ ಆಶ್ಚರಿಪಡುವಂಥದೇನೂ ಇಲ್ಲ. ಅಪರಾಧಿಗಳಿಗೆ ಹಿಂದೂ ಜನತೆಯು ಆಶ್ರಯ ಕೊಡದಿದ್ದರೆ ಅವರು ಬಹುದಿನ ತಲೆತಪ್ಪಿಸಿಕೊಂಡು ತಿರುಗಲಾರರು ಎಂದು ತಮ್ಮ ಖಂಡಿತ ಭಾವನೆಯಿರುವದಾಗಿ ಹೇಳಿದರು. ತನ್ನ ಕಾರ್ಯದ ಫಲಭೋಗವನ್ನು ಉಣ್ಣುವಂತೆ ಮಥುರಾಸಿಂಗನಿಗೆ ಅವನ ಸ್ನೇಹಿತರೂ ಸಲಹೆಗಾರರೂ ತಿಳಿಸಬೇಕು. ಹೀಗೆ ಬಂಧನವನ್ನು ತಪ್ಪಿಸಿ ತಿರುಗುವದು ಶೌರ್ಯದ ಕೃತಿಯಲ್ಲೆಂದು ತಾವೂ ಅವನಿಗೆ ಹೇಳಲು ಇಷ್ಟಪಡುವದಾಗಿ ಹೇಳಿದರು. ಕಾಂಗ್ರೆಸಿಗರ ಸಮಕ್ಷಮದಲ್ಲಿಯೆ ಈ ಅತ್ಯಾಚಾರಗಳು ನಡೆದಿರುವದರಿಂದ ಅಪರಾಧಿಗಳನ್ನು ಕರೆತಂದು ಸಾರ್ವಜನಿಕವಾಗಿ ಪಾಪಕ್ಷಾಲನೆ ಮಾಡಿದ ಹೊರತು ಅವರ ಮೇಲಿನ ಹೊಣೆ ತಪ್ಪಿತು ಎಂದು ತಾವು ಹೇಳುವದಿಲ್ಲೆಂದರು ಗಾಂಧೀಜಿ.

ಜೋಲಾದಲ್ಲಿ ದಂಗೆಯ ಕಾಲದಲ್ಲಿ ವಿಧ್ವಸ್ತವಾದ ಮಸೀದೆಯೊಂದನ್ನು ತಾವು ನೋಡಿದ್ದಾಗಿ ಗಾಂಧೀಜಿಯವರು ತಮ್ಮ ಹೇಳಿಕೆ ಮುಂದರಿಸಿದರು. ಹೋಳಿ ಹಬ್ಬದ ದಿನ ಕೆಲವು ಹಳ್ಳಿಗರು ಮಸೀದೆಯ ಆವಾರದಲ್ಲಿ ಹಬ್ಬವನ್ನಾಚರಿಸಿದ್ದರಿಂದ ಅದಕ್ಕೆ ಇನ್ನಷ್ಟು ಅಪಾಯವಾಗಿದೆಯಂತೆ. ಈ ಸಂಗತಿ ನಿಜವಿದ್ದರೆ ಹಿಂದುಗಳು ಅವರ ಮನೆಗಳನ್ನು ತಿರುಗಿ ಕಟ್ಟಿಕೊಟ್ಟರೂ ಅವರು ಆ ಮನೆಗಳಿಗೆ ಹಿಂತಿರುಗಬಾರದು. ಆ ಮಸೀದೆಯನ್ನು ಸಂದರ್ಶಿಸಬಾರದು ಎಂದು ಕೊಟ್ಟ ಮುನ್ನೆಚ್ಚರಿಕೆಯಾಗಿದೆಂದೆ ತಾವು ಭಾವಿಸುವದಾಗಿ ಹೇಳಿದರು. ಹೋಳೀ ಹಬ್ಬದ ದಿನ ಈ ವಿನಾಶ ನಡೆದದ್ದು ನಿಜವಾದರೆ ಬಿಹಾರದ ಅಷ್ಟೇಕೆ ಇಡೀ ಭಾರತದ ಹಿಂದುಗಳಿಗೆ ಇದು ಅಪಶಕುನ.

ಬಿಹಾರ ಶಾಸನ ಸಭೆಯ ಸದಸ್ಯರಾದ ಮಹಾಂತ ಭಾಗವತ ದಾಸರು ಈ ಅಪರಾಧಗಳಲ್ಲಿ ಭಾಗಿಯಾಗಿದ್ದಾರೆಂದು ತಮಗೆ ಇಂದು ಮುಂಜಾನೆಯ ಲೀಗಿನವರ ಸಭೆಯಲ್ಲಿಯೂ ಮಧ್ಯಾಹ್ನದ ಹಿಂದೂ ಮುಸ್ಲಿಂರ ಸಭೆಯಲ್ಲಿಯೂ ತಿಳಿಸಲಾಯಿತು. ಮಹಾಂತ ಭಾಗವತ ದಾಸರು ಈ ಎರಡೂ ಸಭೆಗಳಿಗೆ ಹಾಜರಿದ್ದರು. ಈ ರೀತಿ ಸಂಶಯ ಪಾತ್ರರಾದಾಗ ಶಾಸನ ಸಭೆಯ ಸದಸ್ಯತ್ವವನ್ನು ಬಿಟ್ಟುಗೊಡುವದು ಕ್ಷೇಮಕರವೆಂದು ತಾವು ಉಪದೇಶಿಸಿದ ಕೂಡಲೆ ಅವರು ಹಾಗೆ ನಡೆದುಕೊಳ್ಳಲು ತತ್ಕ್ಷಣ ಸಿದ್ಧರಾದದ್ದು ಸಂತೋಷದ ಸಂಗತಿ. ತಮ್ಮ ಉಪದೇಶದಂತೆ ನಡೆದುಕೊಳ್ಳಲು ಅವರು ಹಿಂದು ಮುಂದೆ ನೋಡಲಿಲ್ಲ. ಮಹಾಂತ ಭಾಗವತದಾಸರು ಈ ದಂಗೆಯಲ್ಲಿ ಪ್ರತ್ಯಕ್ಷವಾಗಲಿ ಅಪ್ರತ್ಯಕ್ಷವಾಗಲಿ ಭಾಗವಹಿಸಿಲ್ಲ. ಮುಸ್ಲಿಂ ಲೀಗಿನವರೇ ನಡೆಸುವ ನಿಷ್ಪಕ್ಷಪಾತ ವಿಚಾರಣೆಯನ್ನು ಎದುರಿಸಲು ಅವರು ಸಿದ್ಧರಿರುವದಾಗಿ ತಿಳಿಸಲು ತಮಗೆ ಸಂತೋಷವಾಗುತ್ತದೆಂದರು. ಮಹಾಂತರ ಈ ಹೇಳಿಕೆ ನಿಜವಾದದ್ದಿದ್ದರೆ ಹಿಂದುಗಳಲ್ಲಿ ಪಶ್ಚಾತ್ತಾಪದ ಯಾವ ಕುರುಹೂ ಇಲ್ಲದಿರುವಾಗ ಇದೊಂದು ಸಂಗತಿಯೆಂದರು. ತಮಗೆ ಪಶ್ಚಾತ್ತಾಪಪೂರ್ಣವಾದ ಪತ್ರಗಳು ಬರುತ್ತಿವೆಂದು ನಿನ್ನೆ ಸಭೆಯಲ್ಲಿ ಹೇಳಿದ್ದರೂ ಇಂದು ಅನಿವಾರ್ಯವಾಗಿ ಈ ಮಾತನ್ನು ಹೇಳಬೇಕಾಗಿದೆಂದರು ಗಾಂಧೀಜಿ.

೫—೩—೧೯೪೭

ತಾವು ಮರುದಿನವೇ ದಿಲ್ಲಿಗೆ ಹೋಗಲಿರುವದಾಗಿಯೂ ನಾಲ್ಕೈದು ದಿನಗಳಲ್ಲಿ ಹಿಂತಿರುಗುವದಾಗಿಯೂ ಗಾಂಧೀಜಿಯವರು ಇಂದು ಪ್ರಾರ್ಥನೆಯ ಸಭೆಯಲ್ಲಿ ಪ್ರಾರಂಭಕ್ಕೆ ಹೇಳಿದರು.

ನಂತರ ಗಾಂಧೀಜಿಯವರು ಬಿಹಾರ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಪ್ರೊ. ಅಬ್ದುಲ ಬಾರಿಯವರ ಕೊಲೆಯು ಮುನ್ನಾದಿನ ನಡೆದುದನ್ನು ಹೃದಯಸ್ಪರ್ಶಿಯಾಗಿ ಉಲ್ಲೇಖಿಸಿದರು. ಪ್ರೊ. ಬಾರಿಯವರು ಡಾ. ರಾಜೇಂದ್ರಪ್ರಸಾದರ ಶಿಷ್ಯರೂ ಸಹಕಾರ್ಯಕರ್ತರೂ ಆಗಿದ್ದರು. ಡಾ. ರಾಜೇಂದ್ರ ಪ್ರಸಾದರು ತಮ್ಮ ಸೇವೆ ತ್ಯಾಗಗಳಿಂದ ಬಿಹಾರದಲ್ಲಿ ತಮಗಾಗಿ ಅಪೂರ್ವ ಸ್ಥಾನವನ್ನು ಕಟ್ಟಿಕೊಂಡಿದ್ದಾರೆ. ಪ್ರೊ. ಬಾರಿಯವರೂ ಜಮಶೇದಪುರ ಮುತ್ತಿತರ ಕಡೆಗಳಲ್ಲಿ ಕೂಲಿಕಾರರ ಸೇವೆಯನ್ನು ಕೈಕೊಂಡು ಜನರಿಗೆ ಪ್ರಿಯರಾಗಿ ಬಿಹಾರ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷ ಪದವನ್ನು ಹೊಂದಿದ್ದರು. ಸ್ವಾತಂತ್ರ್ಯ ಹೋರಾಟದ ವಿವಿಧ ಸ್ವರೂಪದಲ್ಲಿ ಪ್ರೊ. ಬಾರಿಯವರು ನಿರ್ಭೀತರಾದ ಯೋಧರಾಗಿದ್ದರು. ಪ್ರೊ. ಬಾರಿಯವರ ಕುಟುಂಬದ ಜನರಿಗೆ ಧೈರ್ಯಹೇಳಿ ಅವರ ಮಕ್ಕಳು ಕೈಕೊಳ್ಳಬೇಕಾದ ಕಾರ್ಯದಲ್ಲಿ ಅವರಿಗೆ ಉತ್ಸಾಹವೀಯಲು ತಾವು ಅವರ ಮನೆಗೆ ಹೋಗಿದ್ದಾಗಿ ಗಾಂಧೀಜಿ ಹೇಳಿದರು. ಅವರ ಮನೆಯನ್ನು ಪ್ರವೇಶಿಸಿದ ಕೂಡಲೆ ಅವರು ನಡೆಸಿದ ಸರಳ ಸಾದಾ ಜೀವನದ ರೀತಿಯನ್ನು ಕಂಡು ತಾವು ಬೆರಗಾದೆವೆಂದರು. ಅವರ ಮನೆ ಚಿಕ್ಕದೊಂದು ಸಂದಿಯಲ್ಲಿದೆ. ಪ್ರೊ. ಬಾರಿಯವರು ಬಡಮನುಷ್ಯರಾಗಿದ್ದರು. ಸಿರಿವಂತರಾಗಲು ಅವರಿಗೆ ಬೇಕಾದಷ್ಟು ಅನುಕೂಲತೆಗಳಿದ್ದರೂ ಸಾರ್ವಜನಿಕ ಹಣದ ಬಗ್ಗೆ ಅವರು ತಮ್ಮ ಪ್ರಾಮಾಣಿಕತನವನ್ನು ಕಾಯ್ದುಕೊಂಡಿದ್ದರು ಎಂದು ಜನರು ಹೇಳುತ್ತಿದ್ದ ಮಾತಿನ ಪ್ರತಿಯೊಂದು ಅಂಶವೂ ಆ ಮನೆಯಲ್ಲಿ ಸ್ಪಷ್ಟವಾಗಿ ಮೂಡಿತ್ತು. ಕಾಂಗ್ರೆಸ್ಸಿನ ಕೈಯಲ್ಲಿ ಆಡಳಿತೆಯಿದ್ದು ಕೋಟ್ಯಂತರ ರೂ. ಗಳ ವ್ಯವಹಾರವನ್ನು ಸಾಗಿಸಬೇಕಾದಾಗ ಪ್ರೊ. ಬಾರಿಯಂಥವರ ಅವಶ್ಯಕತೆ ಬಹಳವಾಗುತ್ತದೆ. ತಮ್ಮ ಮೂರನೆಯ ಸಂಚಾರವನ್ನು ಮುಗಿಸಿಕೊಂಡು ಬಂದೊಡನೆ ತಾವು ಪ್ರೊ. ಬಾರಿಯವರ ಸಂಪರ್ಕ ಬೆಳೆಸಿಕೊಳ್ಳಬೇಕು, ಅವರ ಉಚ್ಚ ಅಧಿಕಾರ ಪದಕ್ಕೆ ಸರಿದೋರದ ಅವರ ಸರಳ ಸ್ವಭಾವವನ್ನು ತಿದ್ದಬೇಕು ಎಂದು ತಾವೆಣಿಸಿಕೊಂಡಿದ್ದಾಗಿ ಹೇಳಿದರು. ಬಿಹಾರ ಪ್ರಾಂತದಲ್ಲಿ ಕಾಂಗ್ರೆಸ ಮಂತ್ರಿಮಂಡಳವಿರುವಾಗ ಅದು ಪ್ರಾಂತಿಕ ಕಾಂಗ್ರೆಸ ಸಮಿತಿಯ ಪ್ರಭಾವಕ್ಕೊಳಗಾಗಿರುವಾಗ ಆ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರು ಇಷ್ಟೊಂದು ನಿರಪೇಕ್ಷರಾಗಿರಬಾರದೆಂದು ತಮ್ಮ ಮತ. ಪ್ರೊ. ಬಾರಿಯವರನ್ನು ತಾವು ಸಂಪೂರ್ಣ ನಂಬಿದ್ದಾಗಿಯೂ ಅವರ ಶಬ್ದಗಳನ್ನು ತಾವು ಆದರದಿಂದ ಪಾಲಿಸುತ್ತಿದ್ದುದಾಗಿಯೂ ಮಹಾತ್ಮರು ಹೇಳಿದರು. ಆದರೆ ದೇವರ ಇಚ್ಛೆಯೆ ಬೇರೆಯಾಗಿತ್ತು. ಮನಸಾ ಫಕೀರನಂತಿದ್ದ ಈ ಧೀರನನ್ನು ದೇವರು ಸೆಳೆದೊಯ್ದು ಬಿಹಾರಕ್ಕೆ ಅಪಾರ ಹಾನಿ ಮಾಡಿದ್ದಾನೆ. ಆದರೆ ಬಾರಿಯಂಥವರು ಎಂದಿಗೂ ಸಾಯುವದಿಲ್ಲ. ಅವರು ಅರ್ಧಕ್ಕೆ ಬಿಟ್ಟುಕೊಟ್ಟ ಕೆಲಸವನ್ನು ಉಳಿದವರು ಪೂರೈಸಬೇಕಾಗಿದೆಂದರು ಗಾಂಧೀಜಿ.

ನಂತರ ಗಾಂಧೀಜಿಯವರು ಪ್ರೊ. ಬಾರಿಯವರ ಕೊಲೆಯ ಬಗ್ಗೆ ಹೀಗೆ ಹೇಳಿದರು. ಕಳ್ಳಸಾಗಾಟವನ್ನು ತಡೆಯುವದಕ್ಕಾಗಿ ನೇಮಿಸಿದ್ದ ಗುರ್ಖಾ ಅಧಿಕಾರಿಯೊಡನೆ ಪ್ರೊ. ಬಾರಿಯವರ ವಾಗ್ಯುದ್ಧ ಬೆಳೆದು ಕೊನೆಗೆ ಆ ಅಧಿಕಾರಿಯು ಇವರನ್ನು ಗುಂಡಿಕ್ಕಿ ಕೊಂದ. ಆ ಗುರ್ಖಾನು ಆಝಾದ ಹಿಂದ ಸೇನೆಯಲ್ಲಿದ್ದವನಾಗಿದ್ದ. ಪ್ರೊ. ಬಾರಿಯವರ ಕೊಲೆಯಲ್ಲಿ ಯಾವ ರಾಜಕೀಯ ಉದ್ದೇಶವಿಲ್ಲ. ಅಲ್ಲದೆ ಒಬ್ಬನೆ ಬಾರಿಯವರನ್ನು ಕೊಂದಿದ್ದರಿಂದ ಈ ಕೊಲೆಯ ಅಪರಾಧವನ್ನು ಆಝಾದ ಹಿಂದ ಸೇನೆಯ ಸಂಸ್ಥೆಯ ಮೇಲೆ ಹೊರಿಸುವದೂ ತರವಲ್ಲವೆಂದು ಗಾಂಧೀಜಿಯವರು ಸಭಿಕರನ್ನು ಎಚ್ಚರಿಸಿದರು.

## ಪ್ರಗತಿಯೆಂದರೇನು

( ೭ ನೇ ಪುಟದಿಂದ )

ಹಿತ. ಆದರೆ ದಿನ ಬಳಕೆಯ ವಸ್ತುಗಳು ಒಂದು ಇನ್ನೊಂದರ ಪ್ರತಿಕೃತಿಯಂತೆಯೆ ಇರಬೇಕೆಂದಾಗಲಿ ಅವೆಲ್ಲ ಪ್ರಮಾಣಬದ್ಧವಾಗಿರಬೇಕೆಂದಾಗಲಿ ನಿಯಮವಿಲ್ಲ. ಅಂಥ ವಸ್ತುಗಳಲ್ಲಿ ಪ್ರಮಾಣಬದ್ಧತೆಯನ್ನು ತಂದೊಡ್ಡುವದು ಗುರಿಯಿಲ್ಲದ ಕೆಲಸ. ಆದುದರಿಂದ ಪ್ಲಾಸ್ಟಿಕ್ಸ (Plastics) ನಿಂದ ಬಾಚಣಿಗೆಗಳನ್ನು ಮಾಡುವದು ಅರ್ಥವಿಲ್ಲದ್ದು. ಅದೇ ಪ್ರಕಾರ ನಿತ್ಯೋಪಯೋಗದ ಹಲವು ಸರಕುಗಳಲ್ಲಿಯೂ ಪ್ರಮಾಣ ಬದ್ಧೀಕರಣ ಬೇಕಾಗಿಲ್ಲ. ತದ್ವಿರುದ್ಧವಾಗಿ, ಬಹುಶಃ ನಿತ್ಯೋಪಯೋಗದ ವಸ್ತುಗಳು ಬೇರೆ ಬೇರೆ ಜನರ ವೈಯ್ಯಕ್ತಿಕ ಅವಶ್ಯಕತೆ ರುಚಿಗಳಿಗೆ ಒಗ್ಗುವಂತೆ ವೈವಿಧ್ಯಪೂರ್ಣವಾಗಿರುವದೇ ಗುಣ. ಅಂಥ ಸಂದರ್ಭಗಳಲ್ಲಿ ಮನೆಕೈಗಾರಿಕೆಗಳು ಮಾತ್ರ ಉದ್ದೇಶವನ್ನು ಈಡೇರಿಸ ಬಲ್ಲವು. ಒಬ್ಬ ಮನುಷ್ಯನಿಗೆ ಒಂದು ಜತೆ ಕಾಲ್ಮರಿ ಸಿಕ್ಕಿಸಬೇಕಾದರೆ, ಅವನ ಪಾದಗಳಿಗಾಗಿಯೆ, ಅವುಗಳಲ್ಲಿರಬಹುದಾದ ವಿಕಾರಗಳಿಗೂ ಸರಿಹೋಗುವಂತೆ ಅದನ್ನು ತಯಾರಿಸಬೇಕಾಗುವದು. ವಿಶಿಷ್ಟ ಮನುಷ್ಯನ ಪಾದಗಳಿಗಾಗಿಯೆ ಬೇಕೆಂದು ಕಾಲ್ಮರಿಗಳನ್ನು ಮಾಡುವದು ವಿಜ್ಞಾನಾನುಸಾರವೇ ಆಗಿದೆಯಲ್ಲದೆ [illegible] ಪರಿಸಲು ಬೇಕಾದ ಕೌಶಲ, ಪ್ರಸಂಗಾವಧಾನಗಳನ್ನು ಉಪಯೋಗಿಸಿ ತನ್ನ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಸಮಗಾರನಿಗೆ ಸಹಾಯಕವೂ ಆಗುವದು. ಅತ್ತ ಪ್ರಮಾಣಬದ್ಧ ಕಾಲ್ಮರಿಗಳನ್ನು ತಯಾರಿಸುವದರಿಂದ ಅವುಗಳ ಉತ್ಪಾದನೆ ಹೇರಳವಾಗ ಬಹುದಾದರೂ ಯಾವುದೊಂದು ಜತೆ ವಿಶಿಷ್ಟ ಪಾದಗಳಿಗೆ ಅವು ಸರಿಯಾಗಿ ಹೊಂದುವದು ಸಾಧ್ಯವಿಲ್ಲದ್ದರಿಂದ ಅದು ಅಷ್ಟೊಂದು ಶಾಸ್ತ್ರೀಯ ಅಥವಾ ವೈಜ್ಞಾನಿಕ ಕ್ರಮವೆಂದು ಹೇಳಬರುವದಿಲ್ಲ. ಆದ್ದರಿಂದ ಭಾರೀ ಪರಿಮಾಣದಲ್ಲಿ ಕಾಲ್ಮರಿಗಳನ್ನು ತಯಾರಿಸುವದು ಸಮಗಾರನ ಕೈಗಾರಿಕೆಯೊಡನೆ ಹೋಲಿಸಿದರೆ ವಿಜ್ಞಾನ ವಿರುದ್ಧವೂ ಪ್ರಗತಿವಿರುದ್ಧವೂ ಆಗಿದೆ.

### ಹಿಂಸೆ, ವಿನಾಶ

ಪ್ರಮಾಣಬದ್ಧ ವಸ್ತುಗಳ ಯಾಂತ್ರಿಕ ಉತ್ಪಾದನೆಯ ಫಲಗಳನ್ನು ಕಳೆದ ಎರಡು ಪೀಳಿಗೆಗಳು ಕಂಡಿವೆ. ಕಚ್ಚಾ ಸಾಮಗ್ರಿಗಳು ಬಹಳ ಬೇಕಾಗುತ್ತವೆ. ಅವುಗಳನ್ನು ಜಗತ್ತಿನ ನಾಲ್ಕೂ ಮೂಲೆಗಳಿಂದ ಸಂಗ್ರಹಿಸಬೇಕಾಗುತ್ತದೆ. ತಯಾರಿ ವಸ್ತುಗಳಿಗೆ ನಿಶ್ಚಿತವಾದ ಪೇಟೆಯೂ ಬೇಕಾಗುತ್ತದೆ. ಇದೆಲ್ಲದಕ್ಕೆ ಸಾಗರ ಮಾರ್ಗಗಳನ್ನು ನಿರಾಪದವಾಗಿಡುವದು ಅವಶ್ಯವಾಗುತ್ತದೆ. ಈ ಪರಿಸ್ಥಿತಿಗಳೇ ಎರಡು ಅನಾಹುತಕರ ಜಗದ್ವ್ಯಾಪಿ ಯುದ್ಧಗಳನ್ನು ತಂದೊಡ್ಡಿದವು. ಈ ಎರಡು ಯುದ್ಧಗಳಲ್ಲಿ ಮನುಷ್ಯನ ಉತ್ಪಾದನೆಗಳೂ ಅವನ ಕೌಶಲವೂ ಬಹಳ ಹಾಳಾದವು. ಯಾವುದೇ ಯುದ್ಧ ಖಂಡಿತವಾಗಿಯೂ ಪ್ರಗತಿ ವಿರುದ್ಧವಾದುದು; ಅದು ಮನುಷ್ಯರನ್ನು ವನ್ಯತೆಗೆಳೆಯುವದರಿಂದ ಅದನ್ನು ಅಶಾಸ್ತ್ರೀಯ ಅಥವಾ ವಿಜ್ಞಾನ ವಿರುದ್ಧವೆಂದೂ ಹೇಳಲಡ್ಡಿಯಿಲ್ಲ. ನಮ್ಮ ಮಾನವೀ ಅವಶ್ಯಕತೆಗಳನ್ನು ಸಂತುಷ್ಟಿಗೊಳಿಸುವದಕ್ಕೆ ನಾವು ಕೈಕೊಂಡ ಚಟುವಟಿಕೆಗಳೇ ಈ ಗೋಲವ್ಯಾಪಿ ಯುದ್ಧಗಳಲ್ಲಿ ಪರ್ಯವಸಾನಗೊಂಡದ್ದರಿಂದ ಅವು ಅವೈಜ್ಞಾನಿಕವೂ ವಕ್ರಗತಿಯವೂ ಆಗಿವೆ.

### ಉಪಸಂಹಾರ

ಆದುದರಿಂದ ನಮ್ಮ ದೇಶದಲ್ಲಿ ನಮ್ಮ ಅವಶ್ಯಕತೆಗಳನ್ನು ಪೂರೈಸಲು ಉತ್ಪಾದನೆಯ ಯೋಜನೆಗಳನ್ನು ಮಾಡಲೆತ್ನಿಸುವಾಗ, ನಾವು ಎಚ್ಚರಿಕೆ ವಹಿಸಿ ಅತ್ಯಂತ ವಿಜ್ಞಾನಶುದ್ಧವಾದ ಪದ್ಧತಿಗಳನ್ನೂ ಅತ್ಯಂತ ಪ್ರಗತಿಪರ ಉಪಾಯಗಳನ್ನೂ ಅರಿಸಿಕೊಳ್ಳಬೇಕು. ಬಗೆಬಗೆಯ ವಸ್ತುಗಳನ್ನು ಧಾರಳವಾಗಿ ಹುಟ್ಟಿಸುವದು ಪ್ರಗತಿಯ ಏಕಮಾತ್ರ ಲಕ್ಷಣವಲ್ಲ, ಮತ್ತು ವಿನಾಶವೇ ವಿಜ್ಞಾನದ ಲಕ್ಷಣವೂ ಅಲ್ಲ.

ಈ ಮಾತನ್ನು ನಾವು ಚೆನ್ನಾಗಿ ನೆನಪಿಟ್ಟುಕೊಳ್ಳಬೇಕು. ಶೀಘ್ರ ಪರಿಣಾಮದ ಸಿದ್ಧಿ ಸಂಸ್ಕೃತಿ ನಿರ್ಮಾಣಕ್ಕೆ ಹಿತಾವಹವಲ್ಲ ಪ್ರಕೃತಿಯ ಕಾರ್ಯಪದ್ಧತಿ ನಿಗೂಢ. ಅದು ತನಗೆ ಬೇಕಾದಷ್ಟು ಸಮಯವನ್ನು ತೆಗೆದುಕೊಂಡೇ ತೀರುತ್ತದೆ. ಅವಸರ ಪಡುವ ಮನುಷ್ಯನು ಪ್ರಗತಿಪರನೂ ಆಗಲಾರ, ವಿಜ್ಞಾನಪರನೂ ಆಗಲಾರ ನಮಗೆ ಸೈರಣೆ ಬೇಕು. ನಮ್ಮ ಜೀವನ ಸಿಕ್ಕಾಬಟ್ಟೆ ಓಡದಂತೆ ಒಂದು ಒಜ್ಜೆ ಬೇಕು. ನಾವು ಗ್ರಾಮೋದ್ಯೋಗಗಳ ಮೂಲಕ ಮತ್ತು ವಿಕೇಂದ್ರಿಕೃತ ಉತ್ಪಾದನೆಯಿಂದ ನಮ್ಮ ಅವಶ್ಯಕತೆಗಳನ್ನು ಪೂರೈಸಿಕೊಂಡರೇ ಅದು ಸಾಧ್ಯವಾದೀತು.

ಭಾರೀ ಉದ್ಯೋಗಗಳನ್ನು ಮೇಲೆ ಹೇಳಿದಂತೆ ಅಪರಿಹಾರ್ಯ ಉಪದ್ರವವೆಂದಷ್ಟೇ ಉಪಯೋಗಿಸಬಹುದು ಅಂದರೆ ಮನೆ ಕೈಗಾರಿಕೆಗಳಿಗೆ ಬೇಕಾದ ಯಂತ್ರ, ಉಪಕರಣಗಳ ನಿರ್ಮಾಣಕ್ಕೂ ಗಂಧಕರಸ (sulphuic acid) ಉಕ್ಕು ಮೊದಲಾದ ಮೂಲಭೂತ ಕಚ್ಚಾಸಾಮಗ್ರಿಗಳನ್ನು ಸಿದ್ಧಗೊಳಿಸಲಿಕ್ಕೂ ಅವುಗಳು ಅನುಕೂಲವಾಗಬಹುದು. ಸಂಪರ್ಕ ಸೌಕರ್ಯಗಳು ಸಾರಿಗೆ, ವಾಹನ, ನೀರು ವಿದ್ಯುಚ್ಛಕ್ತಿಗಳಂಥ ಸಾರ್ವಜನಿಕ ಕಾಮಗಾರಿಗಳು ಇವುಗಳಿಗೂ ಭಾರಿ ಉದ್ಯೋಗಗಳ ಉಪಯೋಗವಾದೀತು ಇದನ್ನು ಮೀರಿ ಹೋದರೆ ಅದು ಮಾನವಕುಲದ ಸರ್ವನಾಶಕ್ಕೆ ಕಾರಣವಾಗದಿರದು. ನಿರ್ಣಯಕ್ಕೆ ಬರಬೇಕಾದರೆ ತುಂಬ ಪೂರ್ವ ವಿಚಾರವೂ ಮುಂಜಾಗ್ರತೆಯೂ ಬೇಕಾಗುತ್ತದೆ. ಏನೇ ಇದ್ದರೂ ನಿತ್ಯಾವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕೇಂದ್ರೀಕೃತ ಉತ್ಪಾದನ ಪದ್ಧತಿಯನ್ನು ನಾವು ಅನುಸರಿಸಬಾರದು. ಸಂಶಯ ಬಂದಾಗ ವಿಕೇಂದ್ರೀಕೃತ ಉತ್ಪಾದನ ಪದ್ಧತಿಯ ಬೆನ್ನು ಬೀಳುವದೇ ಹೆಚ್ಚು ಸುರಕ್ಷಿತ. ಆದುದರಿಂದ ವಿಜ್ಞಾನದ ಸಮುಚಿತ ಪ್ರಯೋಗ ಮತ್ತು ನಿಜವಾದ ಪ್ರಗತಿಯ ಪಥವೆಂದರೆ ನಮ್ಮ ನಿತ್ಯಾವಶ್ಯಕತೆಗಳ ಪೂರೈಕೆಗೆ ಮನೆ ಕೈಗಾರಿಕೆಗಳನ್ನೇ ಅವಲಂಬಿಸುವದರಲ್ಲಿದೆಯೆಂದು ನಮ್ಮ ವಾದ.

ಜೆ. ಸಿ. ಕುಮಾರಪ್ಪ

## ಕೇಂದ್ರ ಸರಕಾರವಿದ್ದ ಅಖಂಡ ದೇಶವೇ ನಮ್ಮ ಆದರ್ಶ

### ಸರದಾರ ಪಟೇಲರ ಭಾಷಣ

“ ಅಖಂಡ ದೇಶದಲ್ಲಿ ಒಂದೇಒಂದು ಕೇಂದ್ರ ಸರಕಾರವಿರಬೇಕು. ದೇಶದಲ್ಲಿ ಬೇರೆಬೇರೆ ಘಟಕಗಳಿರಬಹುದು. ಆದರೆ ಇವೆಲ್ಲ ಕೇಂದ್ರ ಸರಕಾರಕ್ಕೆ ಅಧೀನವಾಗಿರಬೇಕು. ಇದೇ ನಮ್ಮ ರಾಜಕೀಯ ಆದರ್ಶ ” ಎಂದು ನಡುಗಾಲ ಸರಕಾರದ ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ನಡಿಯಾದದ ಕನ್ಯಾವಿದ್ಯಾಲಯದಲ್ಲಿ ನೆರೆದ ಖೇಡಾ ಜಿಲ್ಹೆಯ ಕಾಂಗ್ರೆಸ ಕಾರ್ಯಕರ್ತರನ್ನುದ್ದೇಶಿಸಿ ಹೇಳಿದರು.

ಅವರು ಇನ್ನೂ ಹೇಳಿದ್ದೇನಂದರೆ—

ಈ ದೇಶದಲ್ಲಿ ಎಂಥ ಬೇಕಾದಂಥ ಪರಿಸ್ಥಿತಿಯುಂಟಾಗಲಿ. ಬ್ರಿಟಿಶರು ಗೊತ್ತುಪಡಿಸಿದ ತಾರೀಖಿಗೆ ಈ ದೇಶವನ್ನು ಬಿಟ್ಟು ಹೋಗುವರು, ಆದ್ದರಿಂದ ನೀವು ನಿಮ್ಮೊಳಗೆ ಒಮ್ಮತ ಒಕ್ಕಟ್ಟು ಬೆಳೆಯಿಸಿಕೊಳ್ಳಬೇಕು. ಅಧಿಕಾರಕ್ಕಾಗಿ ಕಚ್ಚಾಡುವದನ್ನು ಬಿಟ್ಟುಕೊಡಬೇಕು. ಸಂಸ್ಥಾನದ ಪ್ರಜೆಗಳು ಹಾಗೂ ಬ್ರಿ. ಹಿಂದುಸ್ಥಾನದ ಪ್ರಜೆಗಳು ಒಂದುಗೂಡಬೇಕು. ತರುಣರು ದೇಶದಲ್ಲಿ ಅರಾಜಕತೆಯನ್ನು ತಪ್ಪಿಸುವದಕ್ಕಾ ಸುಸಂಘಟಿತರಾಗಬೇಕು.

ಕಠಿನ ಕಾಲವು ಬಂದಿದೆ. ಆದರೆ ಈ ಕಠಿನ ಕಾಲವನ್ನು ಎದುರಿಸಿದರೆ ಸುಕಾಲವು ಪ್ರಾಪ್ತವಾಗುವದು. ವಿದೇಶಿಯರ ಶೋಷಣೆಯಿಂದ ದೇಶವು ಮುಕ್ತವಾಗಿದೆ. ಹಿಂದುಸ್ಥಾನದ ದರ್ಜೆಯು ಹೆಚ್ಚಿದೆ. ಲೋಕಪ್ರಿಯ ಸರಕಾರದ ಸ್ಥಾಪನೆಯಾದದ್ದರಿಂದ ಅಧಿಕಾರಿಗಳನ್ನು ದ್ವೇಷಿಸುವ ಧೋರಣವು ಹೋಗಬೇಕು. ಅಧಿಕಾರಿ ಹಾಗು ಲೋಕನಿಯುಕ್ತ ಪ್ರತಿನಿಧಿಗಳೊಡನೆ ಪ್ರಜರು ಸಹಕಾರದಿಂದ ಕಾರ್ಯ ಮಾಡಬೇಕು. ಅಧಿಕಾರಿಗಳು ಲಂಚಗುಳಿಗಳಾದರೆ ಅವರಿಗೆ ಯೋಗ್ಯ ಶಾಸನ ಮಾಡಿಸಬಹುದು. ಆದರೂ ಪ್ರಜೆಗಳು ಅವರ ಕಾರ್ಯದಲ್ಲಿ ಅಳತೆಗೆಟ್ಟು ಕೈಹಾಕಬಾರದು.

### ಕೇಂದ್ರ ಸರಕಾರದ ಮುಂಗಡ ಪತ್ರಿಕೆ

ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಸರದಾರ ವಲ್ಲಭಭಾಯಿ ಪಟೇಲರವರು ಕೇಂದ್ರ ಸರಕಾರದ ಮುಂಗಡ ಪತ್ರಿಕೆಯ ಬಗ್ಗೆ ಕೆಳಗಿನಂತೆ ಹೇಳಿದರು:—

ಕೇಂದ್ರ ಸರಕಾರದ ಮುಂಗಡ ಪತ್ರಿಕೆಗೆ ಶಾಸನ ಸಭೆಯ ಎಲ್ಲ ಪಕ್ಷಗಳಿಂದಲೂ, ಸರಕಾರೀ ಸದಸ್ಯರಿಂದ ಕೂಡ ಬೆಂಬಲ ದೊರೆಯಿತು. ಇದು ಸಮತಾವಾದಿಗಳ ಅಥವಾ ಕ್ರಾಂತಿಕಾರಕ ಮುಂಗಡಪತ್ರಿಕೆಯಲ್ಲ. ಬಹು ದೊಡ್ಡ ಕೊರತೆಯನ್ನು ತುಂಬಿಕೊಳ್ಳುವದಕ್ಕಾಗಿ ಶ್ರೀಮಂತರ ಮೇಲೆ ಕರ ಹಾಕಲಾಗಿದೆ. ಈ ಕರಗಳು ಬಡವರ ಕಲ್ಯಾಣಕ್ಕಾಗಿಯೇ ಇವೆಂದು ಹೇಳಲು ಬರುವದಿಲ್ಲ. ಕರದ ಬಗ್ಗೆ ಇದ್ದ ಮತಭೇದಗಳನ್ನು ಸಖ್ಯದಿಂದ ನಿವಾರಿಸಲಾಯಿತು. ಇದರ ಬಗ್ಗೆ ಮಂತ್ರಿಮಂಡಳದಲ್ಲಿ ಏನೇನು ನಡೆಯಿತೆಂಬುದನ್ನು ಮಾತ್ರ ನಾನು ಹೊರಗೆಡಹಲಾರೆ.

ಇನ್ನೊಂದು ಪ್ರಶ್ನೆಗೆ ಉತ್ತರ ಕೊಡುತ್ತ ಸರದಾರರು ತಾವು ವೈಯಕ್ತಿಕವಾಗಿ ಶ್ರೀಮಂತರ ಶತ್ರುಗಳಲ್ಲದಿದ್ದರೂ ಬಂಡವಲಗಾರಿಕೆಯ ತತ್ವವನ್ನು ವಿರೋಧಿಸುವದಾಗಿ ಹೇಳಿದರು.

### ಪೋಲೀಸ ಪಡೆಯೇ ಪ್ರಜರ ಸೇವಾದಲ

ಕಾಂಗ್ರೆಸ ಸೇವಾದಲದ ಭವಿತವ್ಯದ ಬಗ್ಗೆ ಕೇಳಲ್ಪಟ್ಟ ಪ್ರಶ್ನೆಗೆ ಉತ್ತರ ಕೊಡುತ್ತ ನಡುಗಾಲ ಸರಕಾರದ ಗೃಹಮಂತ್ರಿಗಳು ಈ ರೀತಿ ಹೇಳಿದರು. ಪೋಲೀಸರ ಪಡೆಯೇ ಪ್ರಜರ ಸೇವಾದಲ. ಸುಶಿಕ್ಷಿತ ತರುಣರು ಪೋಲೀಸ ಪಡೆಗೆ ಸೇರಿ ಜನರ ಸೇವೆ ಮಾಡಬೇಕು. ಪೋಲೀಸರೊಡನೆ ಹೋರಾಡುವದರಲ್ಲಿ ಅರ್ಥವಿಲ್ಲ.

ಮುಖಂಡ ಮುಖಂಡರೊಳಗೆ ಒಪ್ಪಂದವಾದ ಹೊರತು ಜಾತೀಯ ಗಲಭೆಗಳ ವಿಷಯವಾಗಿ ಏನೂ ಮಾಡಿದರೂ ಫಲವಿಲ್ಲೆಂದು ಸರದಾರರು ಗಲಭೆಯ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟರು.

# ಕರ್ನಾಟಕ

## ಧಾರವಾಡ

ಶಿಕ್ಷಣ ಶಾಖೆಯ ಡಾಯರೆಕ್ಟರರಾದ ಶ್ರೀ ಶಾನಭಾಗರವರು ಕನ್ನಡ ಸಂಶೋಧನ ಸಂಸ್ಥೆಗೆ ಭೆಟ್ಟಿಕೊಟ್ಟು ಅಲ್ಲಿಯ ತಾಡವೋಲೆಗಳ ಸಂಗ್ರಹ ನಕ್ಷೆ ಪಟ ಮೊದಲಾದವುಗಳನ್ನು ಕಂಡು ಸಂತೋಷ ಪ್ರದರ್ಶಿಸಿದರು.

ಜಿಲ್ಹಾ ಮ್ಯಾಜಿಸ್ಟ್ರೇಟರು ಸುದ್ದಿಗಾರರ ಮಾಸಿಕ ಸಭೆಯಲ್ಲಿ ಅಕ್ಕಿಯ ಸಂಗ್ರಹವು ಸಾಕಷ್ಟಿದ್ದರೂ ಜೋಳ ೫ ವಾರ ಗೋದಿ ೪ ವಾರ ಸಾಲುವಷ್ಟಿದೆಂದೂ ಜೋಳದ ಖರೀದಿ ಕಳೆದ ವರ್ಷಕ್ಕಿಂತ ೪ ಪಟ್ಟು ಕಡಿಮೆಯಾಗಿರುವದೆಂದೂ ದೊಡ್ಡ ದೊಡ್ಡ ಜಮೀನದಾರರು ಸರಕಾರಕ್ಕೆ ಕಾಳು ಕೊಡದೆ ಕಳ್ಳ ಪೇಟೆಯಲ್ಲಿ ಮಾರುತ್ತಿರುವರೆಂದೂ ಹೇಳಿದರು. ಬೆಲ್ಲದ ಬಗ್ಗೆ ಅವರು ಪುಣೆ ಜಿಲ್ಹೆಯಿಂದ ತಿಂಗಳಿಗೆ ೪೦೦ ಟನ್ ಬೆಳಗಾವಿ ಜಿಲ್ಹೆಯಿಂದ ೬೦೦ ಟನ್ ಸರಕಾರವು ಕೊಡಮಾಡಿದ್ದರೂ ಬೆಳಗಾವಿಯಲ್ಲಿ ಈ ವರೆಗೆ ೭೫ ಟನ್ ಮಾತ್ರ ಸಿಕ್ಕಿದೇದೂ ಜಿಲ್ಹೆಯಲ್ಲುಂಟಾದ ಕೊರತೆಗೆ ಬೆಳಗಾವಿಯವರೇ ಕಾರಣರೆಂದೂ ತಿಳಿಸಿದರು.

ಧಾರವಾಡ ಜಿಲ್ಹಾ ಒಕ್ಕಲಿಗರ ಪರಿಷತ್ತು ತಾ. ೧೭—೧೮ ಕ್ಕೆ ಹೆಬಸೂರಲ್ಲಿ ಕೂಡಲಿದ್ದು ಅದೇ ಸಮಯಕ್ಕೆ ಕರ್ನಾಟಕ ಮಹಾ ಪರಿಷತ್ತೂ ಜರಗುವದು.

ಆಲೂರ—ಗದಗ ಸರ್ವಿಸ ಮೋಟಾರೊಂದು ಹಾನಗಲ್ಲ ಹತ್ತರ ಒಂದು ತಗ್ಗಿನಲ್ಲಿ ಮುಕ್ಕರಿಸಿಕೊಂಡು ಬಿದ್ದದ್ದರಿಂದ ೪ ಜನರು ಮರಣಹೊಂದಿದರು.

ಗದಗ ಎಸ್ ಸಿ ಮಿಲ್ಲಿನ ರೋವಿಂಗ ಶಾಖೆಯವರು ಸಂಪು ಹೂಡಿದ್ದರಿಂದ ಗಿರಣಿ ಪುನಃ ಮುಚ್ಚಿದೆ.

ರೋಣದಲ್ಲಿ ತಾ ೬ ನೇ ದಿನ ರಾಷ್ಟ್ರೀಯ ಸಪ್ತಾಹ ನಿಮಿತ್ತ ಗ್ರಾಮ ಸಂಕೀರ್ತನ ಧ್ವಜ ವಂದನ ಸಭೆ ಮೊದಲಾದ ಕಾರ್ಯಕ್ರಮಗಳು ಜರುಗಿದವು.

ಕಮ್ಯುನಿಸ್ಟ ಪಕ್ಷದ ಹುಬ್ಬಳ್ಳಿ ಶಾಖೆಯವರು ರಾಷ್ಟ್ರೀಯ ಸಪ್ತಾಹದ ಮೊದಲನೇ ದಿನವನ್ನು ಕರ್ನಾಟಕ ಏಕೀಕರಣ ದಿನವನ್ನಾಗಿ ಆಚರಿಸಿದರು ಶ್ರೀಯುತರಾದ ಕುಳಕುಂದ, ಕೆಂಪಣ್ಣವರ ಮೊದಲಾದವರ ಭಾಷಣಗಳಾದವು.

ಕಾಂಗ್ರೆಸ್ಸಿನಲ್ಲಿಯ ಕೊಳೆಯನ್ನು ಹೋಗಲಾಡಿಸಲು ಗದುಗಿನ ತೋಟಪ್ಪ ನಾರಾಯಣಪುರರು ತಾ ೭ ರಿಂದ ಉಪವಾಸ ಕೈಕೊಂಡಿದ್ದಾರೆ.

ಡಾ. ಎನ್. ಎಸ್. ಹರ್ಡೀಕರರು ಜಿಲ್ಹಾ ಧಾರಣೆ ಹಾಗು ಪೂರೈಕೆ ಸಲಹೆಸಮಿತಿಗೆ ರಾಜೀನಾಮೆ ಕೊಟ್ಟಿದ್ದಾರೆ. ಸಮಿತಿಯಲ್ಲಿಯ ಈ ವರೆಗಿನ ಅನುಭವದಿಂದ ಉದ್ದೇಶವು ಸಫಲವಾಗಿಲ್ಲೆಂದೂ ಪ್ರತಿಯಾಗಿ ಅಡ್ಡಿಯೆ ಆಗುವದೆಂದೂ ಕಂಡುಬಂದದ್ದರಿಂದ ಹೀಗೆ ಮಾಡಿರುವದಾಗಿ ಅವರು ತಿಳಿಸಿರುವರು.

## ಬಳ್ಳಾರಿ

ಜಿಲ್ಹಾ ಪತ್ರಿಕೋದ್ಯೋಗಿಗಳ ಸಂಘಕ್ಕೆ ಶ್ರೀ ಡಿ. ಎಸ್. ಹಣಮಂತರಾಯರು ಅಧ್ಯಕ್ಷರಾಗಿಯೂ ಶ್ರೀ ಟಿ ಬಿ. ಕೇಶವರಾಯರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟಿದ್ದಾರೆ.

ಬಳ್ಳಾರಿಯಲ್ಲಿ ತಾ. ೬ನೇ ದಿನ ರಾಷ್ಟ್ರೀಯ ಸಪ್ತಾಹ ಪ್ರಾರಂಭ ದಿನದ ನಿಮಿತ್ತ ಟಿ. ಸುಬ್ರಹ್ಮಣ್ಯಮರ ಅಧ್ಯಕ್ಷತೆಯಲ್ಲಿ ಸಭೆ ಜರುಗಿ ಉದ್ಯೋಗಿಕ ಮಂತ್ರಿಗಳಾದ ಶ್ರೀ ಎಚ್. ಸೀತಾರಾಮರೆಡ್ಡಿಯವರ ಭಾಷಣವಾಯಿತು.

ದಿವಂಗತ ಟಿ. ರಾಘವಾಚಾರ್ಯರ ಪ್ರಥಮ ವಾರ್ಷಿಕ ಪುಣ್ಯ ದಿನವು ತಾ. ೫ನೇ ದಿನ ಬಳ್ಳಾರಿಯಲ್ಲಿ ಪ್ರೊ ಆರ್. ವಿ. ಜಾಗೀರದಾರರ ಅಧ್ಯಕ್ಷತೆಯಲ್ಲಿ ಸಾಂಗವಾಗಿ ಸ್ಮಾರಕಕ್ಕೆ ಎಲ್ಲರೂ ಸಹಾಯ ಮಾಡಬೇಕೆಂದು ಕೋರಲಾಯಿತು. ಉದ್ಯೋಗಿಕ ಮಂತ್ರಿಗಳಾದ ಶ್ರೀ ಎಚ್. ಸೀತಾರಾಮ ರೆಡ್ಡಿಯವರೂ ಸಭೆಗೆ ಬಂದು ಸ್ಮಾರಕ ಕಾರ್ಯವು ಯಶಸ್ವಿಯಾಗಲೆಂದು ಹರಸಿದರು.

ವಿದ್ಯಾರಣ್ಯ ವಿಜ್ಞಾನ ಸಮಿತಿಯ ಪ್ರಥಮ ವಾರ್ಷಿಕ ಸಭೆಯು ಜಿಲ್ಹಾಧಿಕಾರಿಗಳಾದ ಶ್ರೀ ಅನಂತರಾಮನರ ಅಧ್ಯಕ್ಷತೆಯಲ್ಲಿ ಹಂಪಿಯಲ್ಲಿ ತಾ. ೮ನೇ ದಿನ ಜರುಗಿತು. ಅಧ್ಯಕ್ಷರು ಎಲ್ಲ ಸಾಹಿತ್ಯ, ಧರ್ಮ ಹಾಗು ಮತಗಳ ಸಾರ ಒಂದೇ ಆಗಿದ್ದು ಎಲ್ಲರೂ ಸೌಹಾರ್ದದಿಂದ ನಡೆಯಬೇಕೆಂದು ತಿಳಿಸಿದರು.

## ಬೆಳಗಾವಿ

ಅಂತರರಾಷ್ಟ್ರೀಯ ವ್ಯಾಪಾರಿ ಪರಿಷತ್ತಿಗೆ ಪ್ರತಿನಿಧಿಗಳಾಗಿ ಆರಿಸಲ್ಪಟ್ಟ ಶ್ರೀ ಕರಮರಕರರನ್ನು ಬೆಳಗಾವಿಯ ಲಾ ಕಾಲೇಜ ಹಾಗು ಕಳಕವಾಡಿ ಕರ್ನಾಟಕ ಸಂಘದವರು ಕರಸಿಕೊಂಡು ಸನ್ಮಾನ ಮಾಡಿ ಕಳಿಸಿದರು.

ಪ್ರಾಂತಾಧ್ಯಕ್ಷರಾದ ಶ್ರೀ ನಿಜಲಿಂಗಪ್ಪನವರು ಹುಕ್ಕೇರಿ ಚಿಕ್ಕೋಡಿ ಅಥಣಿ ತಾಲೂಕಗಳಲ್ಲಿ ಜಿಲ್ಹಾಧ್ಯಕ್ಷರೊಡನೆ ಸಂಚಾರ ಕೈಕೊಂಡಿದ್ದು ಹುಕ್ಕೇರಿ ತಾಲೂಕಿನಲ್ಲಿ ರೋಖ ಹಾಗು ಆಶ್ವಾಸನ ಕೂಡಿ ೨೨೦೦ ರೂ ಕೂಡಿರುವವು.

ಶ್ರೀ ಲಕ್ಕಿಯವರ ರಾಜೀನಾಮೆಯಿಂದ ಮುಂಬಯಿ ಶಾಸನ ಸಭೆಯಲ್ಲಿ ತೆರವಾದ ಸ್ಥಳಕ್ಕೆ ಕ. ಪ್ರಾ. ಕಾಂ. ಕಮೀಟಿಯವರು ಶ್ರೀ ವೆಂಕರೆಡ್ಡಿ ಹೂಲಿಯವರನ್ನು ನಿಲ್ಲಿಸಿದ್ದು ಹುಕ್ಕೇರಿ ತಾಲೂಕ ಕಾಂಗ್ರೆಸ ಕಮೀಟಿ ಅಧ್ಯಕ್ಷರಾದ ಶ್ರೀ ನಾವಲಗಟ್ಟಿಯವರು ಅವರನ್ನು ವಿರೋಧಿಸಿದ್ದರಿಂದ ನಾವಲಗಟ್ಟಿಯವರ ಮೇಲೆ ಶಿಸ್ತುಭಂಗದ ನೋಟೀಸು ಹೊರಡಿಸಲಾಗಿದೆ.

## ವಿಜಾಪುರ

ಕಲೆಕ್ಟರರು ಆಹಾರ ಸಲಹೆಗಾರರ ಹಾಗು ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಜಿಲ್ಹೆಯಲ್ಲಿಯ ೨೦ ಸಾವಿರ ಚೀಲ ಗೋದಿಯನ್ನು ಬೀಜದ ಸಲುವಾಗಿ ಕಾದಿಡುವದರಿಂದ ಗೋದಿ ಸೀದಾ ಕಡಿಮೆ ಮಾಡಲಾಗುವದೆಂದು ತಿಳಿಸಿದರು.

ಕಳೆದ ವರ್ಷ ಬಾಬು ಜಹಗೀರದಾರ ಎಂಬವನಿಗೆ ತಮ್ಮ ಅಧಿಕಾರದ ದುರುಪಯೋಗ ಮಾಡಿ ಬೇಡಿ ಹಾಕಿ ಅವಮಾನಗೊಳಿಸಿದ್ದಕ್ಕಾಗಿ ಕೆರೂರಿನ ಮಹಿಬೂಬ, ಶರಪ್ಪ ಹಾಗು ವಾಸುದೇವ ಎಂಬ ಮೂರು ಜನ ಪೋಲೀಸರ ಮೇಲೆ ಬಾಗಲಕೋಟ ರೆಸಿಡೆಂಟ ಮ್ಯಾಜಿಸ್ಟ್ರೇಟರಾದ ಒಣಕುದರಿಯವರಲ್ಲಿ ಖಟ್ಲೆ ನಡೆದದ್ದರಲ್ಲಿ ಮೂವರಿಗೂ ೩ ತಿಂಗಳ ಕೈದು ಹಾಗು ೧೦೦ ರೂ ದಂಡ ಹೀಗೆ ಶಿಕ್ಷೆ ವಿಧಿಸಲ್ಪಟ್ಟಿತು. ಮೂವರ ಮೇಲೆಯೂ ಮೋಟಾರ ಲಾಯಿಸೆನ್ಸ ಸಂಬಂಧದಲ್ಲಿ ಲಂಚ ಕೇಳಿದರೆಂದೂ ಅವನು ಲಂಚ ಕೊಡದಿರಲು ಸ್ಟ್ಯಾಂಡಿನಿಂದ ಪೋಲೀಸ ಠಾಣೆ ವರೆಗೆ ಬೇಡಿ ಹಾಕಿ ಎಳೆದೊಯ್ದು ಅವಮಾನಗೊಳಿಸಿದರೆಂದೂ ಆಪಾದನೆಯಿತ್ತು.

ವಿಜಾಪುರ ಸಾರ್ವಜನಿಕ ವಾಚನಾಲಯಕ್ಕೆ ಶ್ರೀ ಕಂಕಣವಾಡಿ ವಕೀಲರು ಅಧ್ಯಕ್ಷರಾಗಿಯೂ ಶ್ರೀ ಎಸ್. ಎಂ. ಪಾಟೀಲರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟಿದ್ದಾರೆ.

ಬಾಗಲಕೋಟ ನಗರ ಸಭೆಗೆ ಶ್ರೀ ಹುಚ್ಚಪ್ಪಣ್ಣ ವೈಜಾಪುರರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

## ಉತ್ತರ ಕನ್ನಡ

ಹೊನ್ನಾವರ ಸುಂಕದ ಕಚೇರಿಯವರಿಗೆ ಒಂದು ಮಚವೆಯಲ್ಲಿ ಕಳ್ಳಸರಾಯಿ ಸಿಕ್ಕಿದ್ದರಿಂದ ಮೂವರು ಖಲಾಸಿಗಳಿಗೆ ೨ ತಿಂಗಳ ಶಿಕ್ಷೆ ೫೦ ರೂ. ದಂಡ ವಿಧಿಸಲಾಗಿರುವದು.

ಕಾರವಾರ ಹಿಂದೂ ಹಾಯಸ್ಕೂಲಿನ ಸುವರ್ಣ ಮಹೋತ್ಸವವು ಕಾಕಾ ಕಾಲೇಲಕರರ ಅಧ್ಯಕ್ಷತೆಯಲ್ಲಿ ನಡೆಯುವದು. ಅದೇ ಕಾಲಕ್ಕೆ ತಾ. ೧೭ ನೇ ದಿನ ಹಿಂದುಸ್ತಾನಿ ಪ್ರಚಾರಕರ ಸಮ್ಮೇಲನವೂ ಅವರ ಅಧ್ಯಕ್ಷತೆಯಲ್ಲಿ ಜರುಗಲಿವೆ,

ತಾ, ೨೧ ರಿಂದ ೨೪ ರ ವರೆಗೆ ಕಾಕಾ ಕಾಲೇಲಕರರು ಅಂಕೋಲೆಯ ಗ್ರಾಮ ಸೇವಾ ಸಮಿತಿ ಮಂದಿರದಲ್ಲಿ ಜಿಲ್ಹೆಯ ವಿಧಾಯಕ ಕಾರ್ಯಕರ್ತರೊಡನೆ ಚರ್ಚೆ ಮಾಡಲಿದ್ದಾರೆ.

ಕುಮಟೆಯಲ್ಲಿ ಸ್ಥಾಪಿತವಾಗಲಿರುವ ಕಾಲೇಜಕ್ಕೆ ಮುಂಬಯಿ ಸರಕಾರದವರು ೩೮ ಎಕರೆ ಸ್ಥಳವನ್ನು ಕಟ್ಟಡಕ್ಕಾಗಿ ಉಚಿತವಾಗಿ ಕೊಟ್ಟಿರುತ್ತಾರೆ.

ಶಿರಸಿ ಮಾರುತಿ ದೇವಸ್ಥಾನದಲ್ಲಿ ಹರಿಜನ ಪ್ರವೇಶ ಸಮಾರಂಭವು ಕಾಕಾ ಕಾರಖಾನೀಸರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು.

ಜಿಲ್ಹಾ ಮ್ಯಾಜಿಸ್ಟ್ರೇಟರ ಅಪ್ಪಣೆ ಮುರಿದು ಜಿಲ್ಹಾ ರೈತ ಪರಿಷತ್ತು ಕೂಡಿಸಲು ಪ್ರಯತ್ನಿಸಿದ್ದಕ್ಕೆ ವಿಜಾಪುರ, ಧಾರವಾಡ ಹಾಗು ಕಾರವಾರದ ೫ ಕಮ್ಯುನಿಸ್ಟ ಧುರೀಣರು ಬಂಧಿಸಲ್ಪಟ್ಟಿರುವರು.

## ವಿಜಾಪುರ ಜಿಲ್ಹಾ ಲೋಕಲ್ ಬೋರ್ಡ ಚುನಾವಣೆ ಫಲಿತಾಂಶ

### ಕಾಂಗ್ರೆಸ್ಸಿನ ನಿಚ್ಚಳ ಬಹುಮತ

ವಿಜಾಪುರ ಜಿಲ್ಹಾ ಲೋಕಲ್ ಬೋರ್ಡಿನ ಚುನಾವಣೆಯು ತಾ. ೩೦ ಕ್ಕೆ ನಡೆದು ತಾ ೫ ಕೆ ದಿವಸ ಫಲಿತಾಂಶ ಜಾಹೀರ ಮಾಡಲ್ಪಟ್ಟಿತು. ಕೆಳಗಿನವರು ಆರಿಸಿ ಬಂದಿರುವರು.

ವಿಜಾಪುರ ತಾಲೂಕ— ೧ ಶ್ರೀಮತಿ ಸಿದ್ದವ್ವ ಭೈರಕಟ್ಟಿ (ಕಾಂಗ್ರೆಸ) ೨ ವಾಯ. ಜಿ. ಬಿರಾದಾರ (ಕಾಂ) ೩ ಕೊಟ್ರೆಪ್ಪಗೌಡ ಪಾಟೀಲ (ಸ್ವ.) ೪ ಎಂ. ಎಸ್. ಸುಗಂಧಿ [ಕಾಂ.]

ಇಂಡಿ ತಾಲೂಕ:— ೧ ದುಂಡಪ್ಪ ಆಕಲಗಿ (ಕಾಂ.) ೨ ಆರ್. ಎಸ್. ಕಾಳೆ [ಆಂಬೇಡಕರ] ೩ ಡಿ ಎಸ್. ಪಾಟೀಲ (ಕಾಂ.) ೪ ವಿ. ಎಸ್. ದೇಶಪಾಂಡೆ (ಕಾಂ.)

ಸಿಂದಗಿ ತಾಲೂಕ:— ೧ ಜಿ. ಬಿ. ಹೊಲೇರ (ಕಾಂ.) ೨ ವಾಯ. ಎಸ್. ಬಿರಾದಾರ (ಕಾಂ) ೩ ಬಿ. ಬಿ. ಹಾಲಭಾವಿ (ಕಾಂ.) ೪ ಎಸ್. ಆರ್. ತಾರಾಪುರೆ (ಕಾಂ.)

ಬಾಗೇವಾಡಿ ತಾಲೂಕ:— ೧ ಎಸ್. ಬಿ. ಪಾಟೀಲ (ಕಾಂ.) ೨ ಆರ್. ಜಿ. ಪಾಟೀಲ (ಸ್ವ) ೩ ಎಸ್. ಜಿ. ಪಕ್ಕಣ್ಣವರ [ಸ್ವ] ೪ ಎಸ್. ಎನ್. ಪಾಟೀಲ (ಕಾಂ.) ೫ ಡಾ. ಎಸ್. ಬಿ. ಪಾಟೀಲ [ಸ್ವ].

ಮುದ್ದೇಹಾಳ ತಾಲೂಕ:— ೧ ಟಿ. ಕೆ. ಮಿರಜಕರ [ಕಾಂ.] ೧ ಎಸ್. ಸಿ. ಮುಸಳಿ [ಕಾಂ.] ೩ ಎಸ್. ಎಂ. ಸಾಳುಂಕೆ (ಕಾಂ.) ೪ ಬಿ. ಎಂ ಪಾಟೀಲ [ಸ್ವ].

ಹುನಗುಂದ ತಾಲೂಕ— ೧ ಈರಪ್ಪ ಗಾಣಗೇರ [ಕಾಂ.] ೨ ಜಿ. ಎಸ್ ಪಾಟೀಲ [ಕಾಂ.[ ೩ ಜಿ. ಪಿ. ಸಂಜೀವಮಠ (ಕಾಂ.) ೪ ಆರ್. ಆಯ್. ಮಂಟೂ (ಕಾಂ.)

ಬದಾಮಿ ತಾಲೂಕ:— ೧ ಎಸ್. ಬಿ. ತಿಪ್ಪಾ (ಕಾಂ.) ೨ ಮಹಾರುದ್ರಪ್ಪ ಪಟ್ಟಣಶೆಟ್ಟಿ (ಕಾಂ) ೩ ಎಸ್. ಪಿ. ದೇಸಾಯಿ ಸುಳ್ಳ (ಸ್ವ). ೪ ಬಿ ವಾಯ. ನೇಕಾರ (ಸ್ವ) ೫ ಕೆ. ಆರ್. ನಾಡಗೌಡ (ಕಾಂ) ೬ ಎಸ್. ನಾಡಗೌಡ (ಕಾಂ).

ಬಾಗಲಕೋಟ ತಾಲೂಕ:— ೧ ಬಿ. ಟಿ. ಮುರನಾಳ (ಕಾಂ.) ೨ ಎಸ್. ಜಿ. ಮೂಕವಾಡ (ಕಾಂ.) ೩ ವಾಯ. ಟಿ. ಹೊಲೇರ (ಕಾಂ)

ಬೀಳಗಿ ಪೇಠಾ:—೧ ಸೋಮನಗೌಡ ಪಾಟೀಲ (ಕಾಂ.) ೨ ಆರ್. ವಿ. ಬಿರಾದಾರ ಪಾಟೀಲ (ಕಾಂ.)

### ಮುಸಲ್ಮಾನರು

ಉತ್ತರ ವಿಭಾಗ— ೧ ಎ. ಎಫ್. ಇನಾಮದಾರ ೨ ಬಿ. ಎ. ಕಾಜಿ ದಕ್ಷಿಣ ವಿಭಾಗ— ೧ ಆರ್. ಕೆ. ಮಾಗಿ ೨ ಕೆ. ಕೆ. ಮೇಸ್ತ್ರಿ (ಎಲ್ಲರೂ ಲೀಗಿನವರು.)

ಕಾಂಗ್ರೆಸ ಪಕ್ಷದವರು ೪೦ ರಲ್ಲಿ ೨೮ ಸ್ಥಳ ಪಡೆದು ನಿಚ್ಚಳ ಬಹುಮತ ಸಂಪಾದಿಸಿದ್ದು ಶ್ರೀ ಮುರಿಗೆಪ್ಪ ಸುಗಂಧಿಯವರು ಹೊಸ ಅಧ್ಯಕ್ಷರಾಗಲಿರುವರೆಂದು ಸುದ್ದಿಯಿದೆ.

## ಇಂಡೊನೇಶಿಯಾದಿಂದ ೧ ಲಕ್ಷ ಟನ್ ಅಕ್ಕಿ

### ಭಾರತಕ್ಕೆ ಬೇಗನೇ ಬರುವದು

ಇಂಡೋನೇಶಿಯಾದ ಆಹಾರ ಶಿಷ್ಟಮಂಡಲ ಧುರೀಣರಾದ ಡಾ. ಥಾಮಲಜಿಯವರು ಬೇಗನೆ ಭಾರತಕ್ಕೆ ಇಂಡೋನೇಶಿಯಾದಿಂದ ೧ ಲಕ್ಷ ಟನ್ ಅಕ್ಕಿ ಕಳಿಸುವ ಏರ್ಪಾಟು ಮಾಡಲಾಗುವದೆಂದು ಹೇಳಿದರು. ಅವರು ಮುಂಬೈಯ ಸೀದಾ ಪದ್ಧತಿ ಅಭ್ಯಸಿಸಲು ಬಂದಿರುವರು. ಇಂಡೊನೇಶಿಯಾದ ಆಹಾರ ಮಂತ್ರಿಗಳಾದ ಡಾ. ಸುದರ್ಸನೊ ಹಾಗು ನಡುಗಾಲ ಸರಕಾರದ ಆಹಾರ ಮಂತ್ರಿಗಳಾದ ಡಾ. ರಾಜೇಂದ್ರಪ್ರಸಾದರಲ್ಲಿ ಈ ಬಗ್ಗೆ ಮಾತುಕತೆಗಳಾಗಿವೆ ಎಂದೂ ಹೇಳಿದರು.

## ಸಂಸ್ಥಾನಗಳು

ಸಾಂಗಲಿ ಸಂಸ್ಥಾನ ಪ್ರಜಾಪರಿಷತ್ತಿನ ಕಾರ್ಯಕಾರೀ ಮಂಡಲದವರು ಅಧಿಕಾರಿಗಳ ಖಾಸಗಿ ಹಣವನ್ನು ೫೫ ಸಾವಿರ ರೂಪಾಯಿ ಹೆಚ್ಚಿಸುವದಕ್ಕೆ ಪ್ರಜಾಪಕ್ಷದವರು ಅನುಮತಿ ಕೊಟ್ಟದ್ದಕ್ಕೆ ಅಸಮ್ಮತಿ ವ್ಯಕ್ತ ಮಾಡಿ ಹೆಚ್ಚಿನ ಹಣವನ್ನು ಜನತೆ ಹಿತಕ್ಕಾಗಿ ವಿನಿಯೋಗಿಸಬೇಕಾಗಿ [illegible]

ರಾಮದುರ್ಗದ ಗಂಗಪ್ಪಾರ ನಾಗಣ್ಣಾ ಹಾಗು ಅವರ ಸಂಗಡಿಗರನ್ನು ಜಾಮೀನ ಮೇಲೆ ಬಿಡಲಾಗಿದೆ.

## ಬಳ್ಳಾರಿ ಜಿಲ್ಹೆಯಲ್ಲಿ [illegible]

[illegible] ಕೋಶಗಿ ಆಲೂರು ಹಾಗು [illegible] ಸಂದರ್ಶನವಿತ್ತು ಅಲ್ಲಲ್ಲಿಯ ಕುಂದು [illegible] ಗಳನ್ನು ವಿಚಾರಿಸಿ [illegible]

ಮುಂದೆ ಮಂತ್ರಿಗಳು [illegible] ಸಾಯಂಕಾಲ ಬಳ್ಳಾರಿಗೆ [illegible] ದಿನ ಬೆಳಿಗ್ಗೆ ಮಲ್ಲಪ್ಪನ [illegible] ಯವರಿತ್ತ ಅಲ್ಪೋಪಹಾರ [illegible] ವಂದನೆ ಜರುಗಿಸಿದರು. [illegible] ಸಭೆಯಲ್ಲಿ ಜಿಲ್ಹೆಯ ಬೇಡಿಕೆ [illegible] ಕರ್ತವ್ಯದ ಬಗ್ಗೆ ಚರ್ಚೆಯಾಯಿತು. [illegible] ರಾಯಲಸೀಮಾ ಮಹಾಸಭೆಯವರು [illegible] ಸೀಮೆಗೆ ಒಂದೆ ಮಂತ್ರಿ ಸ್ಥಳ [illegible] ನಿಷೇಧವ್ಯಕ್ತಪಡಿಸುವ ಸರಕಾರದಲ್ಲಿ [illegible] ಅನವಶ್ಯಕ ಶಾಖೆಗಳನ್ನು ಕಡಿಮೆ ಮಾಡುವದು. ರಾಯಲ ಸೀಮೆಯನ್ನು ಆಂಧ್ರ ವಿಶ್ವವಿದ್ಯಾಲಯಕ್ಕೆ ಸೇರಿಸದಿರುವದು, ಆಹಾರ ನಿಯಂತ್ರಣ [illegible] ಹಾಳುವದು ಮೊದಲಾದ ದೇಶ [illegible] ಮನವಿಯನ್ನರ್ಪಿಸಿದರು. ಮಂತ್ರಿಗಳು ಉತ್ತರಿಸುತ್ತ ನಾನು ನಿಮ್ಮ ಬೆಂಬಲದಿಂದ ಅಲ್ಲಿಗೆ ಹೋಗಿದ್ದೇನೆ. ರಾಯಲಸೀಮೆಗಷ್ಟೆ ಅಲ್ಲ [illegible] ಪ್ರತಿಯೊಂದು ಭಾಗದಲ್ಲಿ ಅಭಿವೃದ್ಧಿ ಯೋಜನೆಗಳನ್ನು ಅನ್ವಯಿಸಲಾಗುವದೆಂದು ಹೇಳಿದರು.

# ಹಿಂದುಸ್ತಾನ

## ಮುಂಬಯಿ

[illegible] ೬೭ [illegible] ೯.೨೫೦ ವೃಕ್ಷಗಳನ್ನು ನೇರಿಸತಕ್ಕದ್ದೆಂದು ಮುಂಬಯಿ ಸರಕಾರದವರು ಮುಖ್ಯ [illegible] ಯೋಜನೆಯ ಅಂಗವಾಗಿ ಆಜ್ಞೆ ಹೊರಡಿಸಿದ್ದಾರೆ.

ಮುಂಬಯಿಯಲ್ಲಿ ಟ್ರಾಮು ಹಾಗು ಬಸ್ ಕೆಲಸಗಾರರ ಸಂಪಿನ ಮೂಲಕ ಅವುಗಳ ಓಡಾಟ ನಿಂತು ಹೋಗಿದ್ದರಿಂದ ಅವುಗಳನ್ನು ನಡೆಸಿಕೊಂಡು ಹೋಗಲು ಮೇಯರರ ಅಧ್ಯಕ್ಷತೆಯಲ್ಲಿ ಒಂದು ಅವಸರದ ಮಂಡಳ ರಚಿತವಾಗಿದೆ.

ಶ್ರೀಮತಿ ಲೀಲಾವತಿ ಮುನಶಿಯವರು ವಿವಾಹವಿಚ್ಛೇದನ ಮಸೂದೆ ಸಂಬಂಧದ ಪರಿಶೀಲನ ಸಮಿತಿ ವರದಿಗೆ ಭಿನ್ನಮತಪತ್ರಿಕೆ ಜೋಡಿಸಿದ್ದು ಪಕ್ಷದ ಶಿಸ್ತು ಭಂಗವೆಂದು ಕಾಂಗ್ರೆಸ ಪಕ್ಷದ ಪ್ರತೋದರು ಅವರಿಗೆ ಸ್ಪಷ್ಟೀಕರಣ ಕೇಳಿದ್ದಾರೆ.

ಮುಂದಿನ ಜೂನದೊಳಗಾಗಿ ಪ್ರಾಂತದಲ್ಲಿ ೨೦ ಹೊಸ ಒಕ್ಕಲತನ ಶಾಲೆಗಳೂ ಧಾರವಾಡದಲ್ಲಿ ಒಂದು ಅಗ್ರಿಕಲ್ಚರ ಟ್ರೇನಿಂಗಕಾಲೇಜನ್ನೂ [illegible] ೭ ಟ್ರೇನಿಂಗ ಕಾಲೇಜುಗಳನ್ನೂ ತೆರೆಯಲಾಗುವದೆಂದು ಪುನರ್ರಚನೆ ಮಂತ್ರಿಗಳು ತಿಳಿಸಿರುವರು. ಆ ಯೋಜನೆಯ ಕಾರ್ಯವನ್ನೂ ತೀವ್ರ ಕೈಕೊಳ್ಳಲಾಗುವದಾಗಿ ಅವರು ಹೇಳಿದರು.

ಸರದಾರ ವಲ್ಲಭಭಾಯಿಯವರು ತಮ್ಮ ಊರಾದ ಕರಮಸಾದಕ್ಕೆ ಕಳೆದ ವಾರ ಭೆಟ್ಟಿ ಕೊಟ್ಟಾಗ ಅಲ್ಲಿಯ ನಾಗರಿಕರು ಅವರಿಗೆ ೭೨ ತೊಲಿ ಬಂಗಾರದ ತಟ್ಟೆಯನ್ನೂ ಮಾನಪತ್ರವನ್ನೂ ಸಮರ್ಪಿಸಿದರು.

ಪುಣೆಯಲ್ಲಿ ಕೇಂದ್ರ ಸರಕಾರದಿಂದ ಕಟ್ಟಲಾಗುವ ರಾಷ್ಟ್ರೀಯ ರಸಾಯನ ಪ್ರಯೋಗಶಾಲೆಯ ಶಂಕುಸ್ಥಾಪನೆಯು ರಾಜಾಜಿಯವರ ಅಧ್ಯಕ್ಷತೆಯಲ್ಲಿ ಶ್ರೀ ಖೇರರಿಂದ ತಾ ೬ನೇ ದಿನ ಸಾಂಗವಾಯಿತು.

ಆನಂದ ಒಕ್ಕಲತನ ಕಾಲೇಜಿನ ಶಂಕುಸ್ಥಾಪನೆಯು ಸರದಾರ ವಲ್ಲಭಭಾಯಿಯವರಿಂದ ನಡೆಯಿತು. ಗುಜರಾಥವು ಒಕ್ಕಲತನ ಹಾಗು ಗ್ರಾಮೋದ್ಯೋಗಗಳಲ್ಲಿ ಇಡೀ ಹಿಂದುಸ್ತಾನಕ್ಕೆ ಮಾರ್ಗದರ್ಶಿಯಾಗಲಿ ಎಂದು ಅವರು ಹರಸಿದರು.

ದಿನಕ್ಕೆ ೮೦ ಸಾವಿರ ಗಜದಷ್ಟು ನೂಲು ಹೊರ ತೆಗೆಯುವ ಸುಧಾರಿಸಿದ ರಾಟೆಯನ್ನು ಮಹಾರಾಷ್ಟ್ರದ ಚರಕ ಸಂಘದ ಶ್ರೀ ಕಾಳೆಯವರು ಕಂಡು ಹಿಡಿದಿರುವರು.

ಮುಂಬಯಿಯ ಚಾರ್ಟರ್ಡ ಬ್ಯಾಂಕಿನಿಂದ ತಾ ೭ನೇ ದಿನ ಓರ್ವ ವ್ಯಾಪಾರಿಯ ನೌಕರನು ೫೭ ಸಾವಿರ ರೂಪಾಯಿ ತೆಗೆದುಕೊಂಡು ಮೆಟ್ಟಲುಗಳನ್ನು ಇಳಿಯುತ್ತಿದ್ದಾಗ ಯಾರೋ ಮೂವರು ಅವನ ಮೇಲೆ ಹಲ್ಲೆ ಮಾಡಿ ಆ ರೂಪಾಯಿಗಳನ್ನು ಲೂಟಿಮಾಡಿಕೊಂಡು ಟ್ಯಾಕ್ಸಿಯಲ್ಲಿ ಪಾರಾಗಿ ಹೋಗಿರುವರು.

ಬಟ್ಟೆಯ ಕೊರತೆಗೆ ಹಂಚುವಿಕೆಯಲ್ಲಿಯ ಅವ್ಯವಸ್ಥೆ ಹಾಗು ಲಂಚಗುಳಿತನವೇ ಕಾರಣವೆಂದು ಅಹಮ್ಮದಾಬಾದ ಗಿರಣಿ ಒಡೆಯರ ಸಂಘದ ಅಧ್ಯಕ್ಷರಾದ ಸೇಟ ಕಾಂತಿಲಾಲರು ಸಂಘದ ವಾರ್ಷಿಕ ಸಭೆಯಲ್ಲಿ ಭಾಷಣ ಮಾಡುತ್ತ ಹೇಳಿದರು.

ಮುಖ್ಯ ಪ್ರಧಾನರಾದ ಶ್ರೀ ಬಿ ಜಿ ಖೇರರು ಒಕ್ಕಲತನ ಮಂತ್ರಿಗಳಾದ ಶ್ರೀ ಎಂ ಪಿ ಪಾಟೀಲ, ಹಿಂದುಳಿದ ವರ್ಗಗಳ ಮಂತ್ರಿಗಳಾದ ತಪಾಸೆ ಮೊದಲಾದವರೊಂದಿಗೆ ದಹಾಣು ಭಾಗದಲ್ಲಿಯ ಮಹಾಲಕ್ಷ್ಮಿ ಜಾತ್ರೆಗೆ ಭೆಟ್ಟಿಕೊಟ್ಟು ಆದಿವಾಸಿಗಳ ಪರಿಸ್ಥಿತಿ ಸುಧಾರಣೆಗೆ ಪ್ರಾಶಸ್ತ್ಯ ಕೊಡಲಾಗುವದೆಂದು ವಾರ್ಲಿ ಜನರಿಗೆ ಆಶ್ವಾಸನವಿತ್ತರು.

ಶಾಂತತೆ ಕಾಯ್ದುಕೊಳ್ಳಲು ಬಲವನ್ನು ಉಪಯೋಗಿಸಬೇಕಾದರೂ ತಾವು ಹಿಂದೆ ಮುಂದೆ ನೋಡುವದಿಲ್ಲೆಂದು ಗೃಹಮಂತ್ರಿಗಳಾದ ಮುರಾರಜಿಯವರು ಎರಂಡೋಲದಲ್ಲಿ ಭಾಷಣ ಮಾಡುತ್ತ ಹೇಳಿದರು.

## ಆಸಾಮ

ಅಖಿಲ ಭಾರತ ಗುರಖಾಲೀಗಿನವರು ಗುಂಪುಗಳ ಯೋಜನೆಗೆ ವಿರೋಧ ಪ್ರದರ್ಶಿಸಿರುವರು.

ವಲಸೆಗಾರರನ್ನು ಹೊರದೂಡುವ ಸರಕಾರದ ಧೋರಣ ಪ್ರತಿಭಟಿಸಲು ಮುಸ್ಲಿಂ ಲೀಗಿನವರು ಎಲ್ಲ ಜಿಲ್ಹೆಗಳಲ್ಲಿ ಸವಿನಯ ಕಾಯದೆ ಭಂಗ ಮಾಡಲು ಸಿದ್ಧಯಿಸಿದ್ದಾರೆ ಸರಕಾರವು ಕಾಯದೆ ಭಂಗದ ಬೆದರಿಕೆಗೆ ಸೊಪ್ಪು ಹಾಕುವದಿಲ್ಲೆಂದು ಮುಖ್ಯ ಪ್ರಧಾನ ಬಾರ್ಡೋಲಾಯಿಯವರು ಹೇಳಿರುವರು.

ಪ್ರಾಂತದ ೧೨ ಸಾವಿರ ಪ್ರಾಥಮಿಕ ಶಿಕ್ಷಕರು ತಿಂಗಳಿಗೆ ೪೦ ರೂಪಾಯಿ ಕನಿಷ್ಠ ಸಂಬಳ ಬೇಡಿಕೆ ಮಾಡಿದ್ದಾರೆ.

## ಮದ್ರಾಸ

ತಿರುಪತಿಯ ವೆಂಕಟೇಶ ದೇವಾಲಯದಲ್ಲಿ ಹರಿಜನರಿಗೆ ಪ್ರವೇಶಕೊಡಲು ಮದ್ರಾಸ ಸರಕಾರದ ಅನುಮತಿ ದೊರೆತಿದೆ. ಹೊಸದಾಗಿ ರಚಿತವಾದ ದೇವಸ್ಥಾನದ ಆಡಳಿತ ಸಮಿತಿಯಲ್ಲಿ ಒಬ್ಬ ಹರಿಜನನೂ ಇರುವನು.

ಸಂಸ್ಥಾನಗಳು ಉಳಿದ ಭಾರತದೊಡನೆ ಸಂಯುಕ್ತವಾಗುವದರಲ್ಲಿಯೆ ಅವುಗಳ ಹಿತವಿದೆಯೆಂದು ಶ್ರೀ ಟಿ. ಆರ್. ವೆಂಕಟರಾಮಶಾಸ್ತ್ರಿಯವರು ಅಭಿಪ್ರಾಯಪಟ್ಟಿರುವರು.

ಮದ್ಯಪ್ರತಿಬಂಧ ಜಿಲ್ಹೆಗಳಲ್ಲಿ ಕಂಡುಬರುವ ಕುಡುಕರಿಗೂ ಶಿಕ್ಷೆ ವಿಧಿಸಲು ಸರಕಾರದವರು ಉಪಾಯ ಕೈಕೊಳ್ಳಲಿದ್ದಾರೆ.

ಹೆಚ್ಚು ನೂಲು ಹೊರಡಿಸಲು ಶಕ್ತವಾಗುವ ಸುಧಾರಿಸಿದ ಚರಖಾ ಕಂಡುಹಿಡಿಯಲು ಸರಕಾರವು ಕೆಲವೊಂದು ಹಣ ತೆಗೆದಿಟ್ಟಿದೆ.

ಸಾಮಾನ್ಯ ಆಡಳಿತೆಯ ಸಮಸ್ಯೆಗಳ ಸಂಬಂಧದಲ್ಲಿ ಸರಕಾರಕ್ಕೆ ಸಲಹೆ ಕೊಡಲು ಸರಕಾರದವರು ಶಾಸನ ಸಭಾ ಸದಸ್ಯರ ಸ್ಥಾಯಿ ಸಮಿತಿಗಳನ್ನು ರಚಿಸಲಿರುವರು.

ಪೋಲೀಸರು ಕರೂರ ಬಳಿಯ ಒಂದು ಹಳ್ಳಿಗೆ ಅಪರಾಧದ ತಪಾಸಣೆಗೆ ಹೋದಾಗ ತಮ್ಮ ಮೇಲೆ ದಾಳಿಯಾದ್ದರಿಂದ ಗೋಳೀಬಾರ ಮಾಡಿದರು. ಗೋಳೀಬಾರಿನಲ್ಲಿ ಇಬ್ಬರು ಸತ್ತಿರುವರು.

ಆಂಧ್ರ ಮಹಾಸಭೆಯ ವಿಶೇಷ ಅಧಿವೇಶನವು ತಾ. ೫ಕ್ಕೆ ಸಾಂಗವಾಗಿ ಘಟನಾ ಸಮಿತಿಯು ಪ್ರತ್ಯೇಕ ಪ್ರಾಂತದ ಇಚ್ಛೆಯನ್ನು ಪೂರೈಸದೆ ಹೋದರೆ ಆಂಧ್ರ ಸದಸ್ಯರು ಘಟನಾ ಸಮಿತಿಯಿಂದಲೂ ಮದ್ರಾಸ ಶಾಸನ ಸಭೆಯಿಂದಲೂ ಹೊರಬಿದ್ದು ಬರಬೇಕಾಗಿ ತೀರ್ಮಾನಿಸಿರುವದು.

## ಹೊಸದಿಲ್ಲಿ

ಜವಳಿ ಗಿರಣಿ ಕೂಲಿಕಾರರು ಹಾಗು ವ್ಯವಸ್ಥಾಪಕರಲ್ಲಿ ನಡೆದ ತಂಟೆಯಲ್ಲಿ ಮಹಾತ್ಮಾ ಗಾಂಧಿಯವರು ಆಚಾರ್ಯ ಕೃಪಲಾನಿಯವರನ್ನು ಮಧ್ಯಸ್ಥರನ್ನಾಗಿ ನೇಮಿಸಿದ್ದಾರೆ.

ಅಣು ಶಕ್ತಿಯ ಅಭಿವೃದ್ಧಿ ಸಂಬಂಧದಲ್ಲಿ ವಿಚಾರಮಾಡಿ ವರದಿಮಾಡಲು ಹಿಂದುಸ್ತಾನ ಸರಕಾರದವರು ಸರ್ ಭಾಟನಗರ ಹಾಗು ಡಾ. ಹೋಮಿ ಭಾಭಾರನ್ನು ನೇಮಿಸಿದ್ದಾರೆ.

ಬೇರೆ ಬೇರೆ ಭಾಷೆಗಳ ಸಾಹಿತಿಗಳಲ್ಲಿ ಸಾಂಸ್ಕೃತಿಕ ಸಂಪರ್ಕ ಬೆಳೆಸಲು ಪ್ರಮುಖ ಭಾಷೆಗಳ ಸಾಹಿತಿಗಳ ಪರಿಷತ್ತು ಎಪ್ರಿಲ ಕೊನೆಯಲ್ಲಿ ಇಲ್ಲಿ ಜರುಗಲಿದೆ. ಡಾ. ರಾಜೇಂದ್ರಪ್ರಸಾದರು ಅಧ್ಯಕ್ಷತೆ ವಹಿಸುವರು.

ಇಂಡೋನೇಶಿಯಾ ಪ್ರಜಾರಾಜ್ಯದ ಮುಖ್ಯ ಪ್ರಧಾನರಾದ ಡಾ. ಶಹರೀರರು ತಾ ೬ ನೇ ದಿನ ಜಿನ್ನಾರವರ ಭೆಟ್ಟಿ ತೆಗೆದುಕೊಂಡು ದೀರ್ಘ ಮಾತುಕತೆ ನಡೆಸಿದರು.

ಬಿ ಡಿ ಅಹುಜಾರರು ಅಸ್ಟ್ರೇಲಿಯಾದಲ್ಲಿ ಹಿಂದುಸ್ತಾನ ಸರಕಾರದ ವ್ಯಾಪಾರಿ ಕಮೀಶನರರಾಗಿ ನೇಮಿಸಲ್ಪಟ್ಟಿದ್ದಾರೆ.

ಅಂಚೆ ಹಾಗು ತಂತಿಖಾತೆಯ ಬೇರೆ ಬೇರೆ ಶಾಖೆಗಳಲ್ಲಿ ಅಲ್ಪಸಂಖ್ಯಾಕರ ಪ್ರಾತಿನಿಧ್ಯ ಕಡೆಗೆ ಲಕ್ಷ ಕೊಡಲು ಖಾನಬಹದ್ದೂರ ಎಂ ಎನ್ ಖಾನರು ವಿಶೇಷಾಧಿಕಾರಿಗಳಾಗಿ ನೇಮಿಸಲ್ಪಟ್ಟಿರುವರು.

ಭಾರತ ಮಂತ್ರಿಗಳಿಂದ ನೇಮಕವಾದ ನೌಕರರ ಹಾಗು ಸೇನಾಧಿಕಾರಿಗಳ ಪರಿಹಾರ ಸಂಬಂಧದಲ್ಲಿ ಚಕ್ರವರ್ತಿ ಸರಕಾರದ ಧೋರಣವು ಈ ತಿಂಗಳ ಕೊನೆಯೊಳಗಾಗಿ ಹೊರಬೀಳಲಿದೆ. ಹಿಂದುಸ್ತಾನ ಸರಕಾರದವರು ಕೂಡಲೆ ನಿಯಂತ್ರಣ ವರ್ಗಾಯಿಸಬೇಕೆಂದು ಕೇಳಿದ್ದರಿಂದ ಇನ್ನೂ ಕಗ್ಗಂಟು ಬಿಟ್ಟಿಲ್ಲ.

ಹೆನ್ರಿ ಎಫ್ ಗ್ರ್ಯಾಡಿಯವರು ಹಿಂದುಸ್ತಾನದಲ್ಲಿ ಅಮೇರಿಕ ರಾಯಭಾರಿಗಳಾಗಿ ನೇಮಕ ಹೊಂದಿದ್ದಾರೆ.

## ಸಿಂಧ

ವಿಶ್ವವಿದ್ಯಾಲಯ ಕಾಯಿದೆ ಸಂಬಂಧದಲ್ಲಿ ಲೀಗಿನವರು ಈಗ ತಮ್ಮ ಹಟ ಬಿಟ್ಟುಗೊಟ್ಟು ತಿದ್ದುಪಡಿಗಳ ಚರ್ಚೆಗಾಗಿ ವಿರುದ್ಧ ಪಕ್ಷದವರನ್ನು ಆಮಂತ್ರಿಸಿದ್ದಾರೆ.

## ಬಂಗಾಲ

ನವಖಾಲಿ ಜಿಲ್ಹೆಯ ಸೋನಾರಪುರ ಎಂಬಲ್ಲಿ ಒಬ್ಬನು ಉಪವಾಸದಿಂದ ಸತ್ತಿರುವನೆಂದು ಪ್ರಾಂತಿಕ ಕಾಂಗ್ರೆಸ ಕಮೀಟಿಗೆ ತಂತಿ ಬಂದಿದೆ.

ಸತೀಶ ಚಂದ್ರದಾಸಗುಪ್ತರು ಮಹಾತ್ಮರಿಗೆ ತಂತಿಕಳಿಸಿ ನವಖಾಲಿ ಜಿಲ್ಹೆಯಲ್ಲಿ ಇನ್ನೂ ಪುಂಡಾಟಿಕೆ ನಿಂತಿಲ್ಲೆಂದೂ ಮಾರ್ಚ ೨೩ ರಿಂದ ೫ ಕೊಳ್ಳೆ ಪ್ರಕರಣಗಳು ನಡೆದಿದ್ದು ಒಂದು ಕುಟುಂಬದವರನ್ನು ಜೀವಂತ ಸುಡಲು ಪ್ರಯತ್ನಿಸಲಾಯಿತೆಂದೂ ತಿಳಿಸಿದ್ದಾರೆ. ಮಹಾತ್ಮರು ಅವರಿಗೆ ಹಿಂದುಗಳು ಅಲ್ಲಿಂದ ಹೊರಬೀಳಬೇಕು ಇಲ್ಲವೆ ಜಾತೀಯ ಭೂತಕ್ಕೆ ಬಲಿಯಾಗಬೇಕು ಎಂದು ಉತ್ತರ ಕೊಟ್ಟಿರುವರು,

ಕಲಕತ್ತಾ ಹೌರಾಗಳಲ್ಲಿ ಇತ್ತೀಚಿನ ಗಲಭೆಗಳ ಮೂಲಕ ಗಂಡಾಂತರ ಪರಿಸ್ಥಿತಿ ಸಾರಲಾಗಿದೆ ಈಗ ದುರ್ಘಟನೆಗಳು ಕಡಿಮೆಯಾಗಿ ಪರಿಸ್ಥಿತಿ ಸುಧಾರಿಸಿರುವದು.

ಲೀಗ ಎಂ ಎಲ್ ಎ ಗಳು ಚೌಧರಿ ಖಲಿಕ ಉಜಮಾನರನ್ನು ಕಂಡು ಮಂತ್ರಿಮಂಡಲವನ್ನು ಪುನರ್ಘಟಿಸಲು ಕೇಳಿಕೊಂಡರು. ಖಲಿಕಉಜಮಾನರು ಶಾಸನ ಸಭೆಯಲ್ಲಿಯ ಲೀಗ ಪಕ್ಷದ ಧುರೀಣರಿಗೇ ಅದು ಸೇರಿದ್ದೆಂದೂ ಈಗ ಒಕ್ಕಟ್ಟಿನಿಂದ ನಡೆಯುವದು ಅವಶ್ಯವಿದೆಯೆಂದೂ ತಿಳಿಸಿದರು. ಜಿನ್ನಾರವರೂ ಇದೇರೀತಿ ಸಲಹೆಯಿತ್ತಿದ್ದಾರೆ.

## ಪಂಜಾಬ

ರಾವಳಪಿಂಡಿ ಹಾಗು ಕ್ಯಾಂಬೆಲಪುರ ಭಾಗಗಳಲ್ಲಿಯ ಮುಸಲ್ಮಾನೇತರರು ಗಲಭೆ ಪರಿಸ್ಥಿತಿ ಮೂಲಕ ಊರು ಬಿಡಹತ್ತಿರುವರು.

ಲಾಹೋರದಲ್ಲಿ ಇನ್ನೂ ಆಗಾಗ್ಗೆ ಇರಿತಗಳು ನಡೆದಿರುವವು.

ಮಹಾತ್ಮಾ ಗಾಂಧಿಯವರು ದಿಲ್ಲಿಯಲ್ಲಿಯ ಕಾರ್ಯ ಮುಗಿಸಿಕೊಂಡು ಪಂಜಾಬದಲ್ಲಿ ೧ ವಾರ ಕಳೆಯಲಿರುವರೆಂದು ತಿಳಿದು ಬರುತ್ತದೆ.

ಸರದಾರ ಸ್ವರಣಸಿಂಗ ಹಾಗು ಸರದಾರ ಉಜ್ಜಲಸಿಂಗರು ಒಂದು ಪ್ರಕಟನೆ ಹೊರಡಿಸಿ ಪಂಜಾಬ ವಿಭಜನೆಯ ತಳಹದಿ ಮೇಲೆ ಲೀಗಿನೊಡನೆ ಒಡಂಬಡಿಕೆ ಮಾಡಿಕೊಳ್ಳಲು ತಾವು ಸಿದ್ಧರಿರುವದಾಗಿಯೂ ಆದರೆ ಮೊದಲು ಶಾಂತತೆ ನೆಲೆಗೊಳ್ಳಬೇಕೆಂದೂ ಪ್ರಸಿದ್ಧಿಸಿದ್ದಾರೆ.

ಮುಲ್ತಾನ ನಗರದ ಮೇಲೆ ಗಲಭೆ ಸಂಬಂಧದಲ್ಲಿ ೧೦ ಲಕ್ಷ ರೂ. ಸಾಮೂಹಿಕ ದಂಡ ಹೇರಲಾಗಿದೆ.

ಗವರ್ನರರು ಗುರಗಾಂವ ಜಿಲ್ಹೆಗೆ ಭೆಟ್ಟಿ ಕೊಟ್ಟು ಬಂದರು: ಉಭಯ ಪಂಗಡಗಳ ಹಳ್ಳಿಗಳೂ ಅಗ್ನಿಗಾಹುತಿಯಾಗಿದವು. ಸೈನಿಕರ ಗಸ್ತಿ ಪರಿಣಾಮವಾಗಿ ಪರಿಸ್ಥಿತಿ ಈಗ ಸುಧಾರಿಸಿದೆ.

ಜಲಂದರ ಜೇಲಿನಲ್ಲಿಡಲ್ಪಟ್ಟ ಧರ್ಮಪಾಲ ಎಂಬ ಸಾಮ್ಯವಾದಿ ಕಾರ್ಯಕರ್ತನು ಜೇಲಿನಲ್ಲಿ ಮರಣ ಹೊಂದಿದನು.



## ಮುಂಬೈ ಮುಖ್ಯ ಮಂತ್ರಿಗಳಲ್ಲಿ ಕರ್ನಾಟಕ ಶಿಷ್ಟಮಂಡಳ

### ಎಂಟು ಬೇಡಿಕೆಗಳ ನಿವೇದನೆ

(ಸ್ವಂತ ಸುದ್ದಿಗಾರರಿಂದ)

ಮುಂಬಯಿ ಶಾಸನ ಸಭೆಯ ಕರ್ನಾಟಕದ ಸದಸ್ಯರ ಶಿಷ್ಟಮಂಡಳವೊಂದು ತಾ ೮ಕ್ಕೆ ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಬಿ. ಜಿ. ಖೇರರನ್ನು ಕಂಡು ಕರ್ನಾಟಕದ ಅಭಿವೃದ್ಧಿಗಾಗಿ ಈ ಕೆಳಗಿನ ೮ ಬೇಡಿಕೆಗಳನ್ನು ಮಂಡಿಸಿತು.

೧) ನ್ಯಾಯವಾದ ಶಾಶ್ವತ ನೀರಾವರಿ ಧೋರಣೆಯನ್ನು ಕೈಕೊಳ್ಳಬೇಕು. ೨) ದೊಡ್ಡ ಪ್ರಮಾಣದಲ್ಲಿಯೂ ಚಿಕ್ಕ ಪ್ರಮಾಣದಲ್ಲಿಯೂ ಉದ್ಯೋಗಗಳನ್ನು ಪ್ರಾರಂಭಿಸಬೇಕು. ೩) ಕಾರವಾರ ಮತ್ತು ಭಟಕಳ ಬಂದರಗಳನ್ನು ಅಭಿವೃದ್ಧಿಗೊಳಿಸಬೇಕು. ೪) ಈ ಬಂದರಗಳ ಅಭಿವೃದ್ಧಿ ನಡೆಯಲಿ ಬಿಡಲಿ ಕರ್ನಾಟಕದಲ್ಲಿ ಹಡಗು ಕಟ್ಟುವ ಕಾರಖಾನೆಯನ್ನು ಸ್ಥಾಪಿಸಬೇಕು. ೫) ನೈಸರ್ಗಿಕ ಸೌಕರ್ಯದಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಬೇಕು. ಗ್ರಿಡ್ ವಿದ್ಯುತ್ ಯೋಜನೆಯನ್ನು ಜಾರಿಗೆ ತರಬೇಕು. ೬] ಸಾರಿಗೆ ಸುಧಾರಣೆ [illegible] ಆಗಬೇಕು; ರೇಲ್ವೆ, ರಾಜಮಾರ್ಗಗಳ ವಿಸ್ತಾರವಾಗಬೇಕು. ೭) ಸಾರ್ವಜನಿಕ ಆರೋಗ್ಯದ ಯೋಜನೆಗಳನ್ನು ವಿಸ್ತರಿಸಬೇಕು. ೮) ಆದಷ್ಟು ಬೇಗನೆ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕು. ಇದಕ್ಕೆ ಅವಶ್ಯಕವಿರುವ ತಾಂತ್ರಿಕ ಹಾಗೂ ಇತರ ಶಾಲೆ ಕಾಲೇಜುಗಳನ್ನು ಕೂಡಲೆ ಸ್ಥಾಪಿಸಬೇಕು

ಈ ಶಿಷ್ಟಮಂಡಳದಲ್ಲಿ ಶ್ರೀಗಳಾದ ವೀರನಗೌಡಾ ಪಾಟೀಲ, ಅಂದಾನೆಪ್ಪಾ ದೊಡ್ಡಮೇಟಿ, ದಳವಾಯಿ, ಕುಟ್ರಿ, ಕೆ. ಬಿ. ದುಂದೂರ, ಚನಬಸಪ್ಪಾ ಅಂಬಲಿ, ಆರ್. ಎಂ. ಪ್ರಭು, ಎಸ್. ಎಚ್. ಶಾಸ್ತ್ರಿ, ಜಿ. ಎಸ್. ಸಜ್ಜನ ಇವರಿದ್ದರು. ಶ್ರೀ ವೆಂಕಟೇಶ ಮಾಗಡಿಯವರು ನಂತರ ಈ ಶಿಷ್ಟಮಂಡಳವನ್ನು ಕೂಡಿಕೊಂಡರು.

ಇವರ ಬೇಡಿಕೆಗಳ ಚರ್ಚೆ ನಡೆದಾಗ ಪೂರೈಕೆ ಮಂತ್ರಿ ಶ್ರೀ ದಿನಕರರಾವ ದೇಸಾಯಿ ಒಕ್ಕಲತನ ಮಂತ್ರಿ ಶ್ರೀ ಮಲ್ಲನಗೌಡ ಪಾಟೀಲ, ಉಪಮಂತ್ರಿಗಳಾದ ಶ್ರೀ ಕೆ. ಎಫ್. ಪಾಟೀಲ, ಸ. ಪ. ಗಾಂವಕರ, ಎಸ್. ಆರ್. ಕಂಠಿ ಇವರೂ ಚರ್ಚೆಯಲ್ಲಿ ಭಾಗವಹಿಸಿದ್ದರು.

ಈ ಕರ್ನಾಟಕ ಶಿಷ್ಟಮಂಡಳದ ಬೇಡಿಕೆಗಳನ್ನು ಮುಖ್ಯ ಮಂತ್ರಿಗಳು ಶಾಂತರೀತಿಯಿಂದ ಕೇಳಿಕೊಂಡು ಇವುಗಳಲ್ಲಿಯ ಕೆಲವು ಸಂಗತಿಗಳನ್ನು ತಾವು ಸ್ವತಃ ಪರಿಶೀಲಿಸುವದಾಗಿ ಹೇಳಿದರು.

ಕರ್ನಾಟಕದ ಸಮಸ್ಯೆಗಳ ಬಗ್ಗೆ ಮುಖ್ಯ ಮಂತ್ರಿಗಳು ತೋರಿದ ಈ ಆಸ್ಥೆಗಾಗಿ ಶಿಷ್ಟಮಂಡಳದವರು ಅವರ ಅಭಾರ ಮನ್ನಿಸಿದರು.

## ಸಂಸ್ಥಾನಗಳು

ಹೈದರಾಬಾದ ಸಂಸ್ಥಾನ ನಾಲಗೊಂಡ ಜಿಲ್ಹೆಯ ನಾಮುರಾಮ ಹಳ್ಳಿಯಲ್ಲಿ ಕಮ್ಯುನಿಸ್ಟರಿಗೂ ಪೋಲೀಸರಿಗೂ ತಿಕ್ಕಾಟ ಸಂಭವಿಸಿ ಪೋಲೀಸರ ಗೋಳೀಬಾರಿನಲ್ಲಿ ಇಬ್ಬರು ಮರಣ ಹೊಂದಿರುವರು.

ಕಾಶ್ಮೀರ ಚಲೇಜಾವ ಚಳವಳಿಯಲ್ಲಿ ಒಟ್ಟು ೧೬೦೮ ಜನರು ಬಂಧಿಸಲ್ಪಟ್ಟು ೫೭೬ ಜನರು ಶಿಕ್ಷೆ ವಿಧಿಸಲ್ಪಟ್ಟದ್ದು ೫೧ ಸಾವಿರ ರೂ. ದಂಡ ಹೇರಲ್ಪಟ್ಟದ್ದು ತಿಳಿಯುತ್ತದೆ.

ಕಾಠೇವಾಡ ಜನರ ಮಹಾ ಅಧಿವೇಶನವು ಮೇ ತಿಂಗಳಲ್ಲಿ ನಡೆಯಲಿದ್ದು ಡಾ. ಪಟ್ಟಾಭಿಯವರು ಅಧ್ಯಕ್ಷರಾಗಲು ಒಪ್ಪಿದ್ದಾರೆ.

ಔಂಧ ಸಂಸ್ಥಾನ ಶಾಸನ ಸಭೆಯ ಅಧಿವೇಶನವು ಇದೇ ತಾ|| ೨೭ ಕ್ಕೆ ನಡೆಯುವದು.

ಚಿತ್ರದುರ್ಗ ಜಿಲ್ಲಾ ಬೋರ್ಡಿಗೆ ದಾವಣಗೆರೆ ತಾಲೂಕಿನಿಂದ ಶ್ರೀ ಕೆ. ಎಸ್. ಸಿದ್ದಪ್ಪನವರು ಅವಿರೋಧ ಆರಿಸಲ್ಪಟ್ಟಿದ್ದಾರೆ.

ಗಂಗಾವತಿಯ ಕಾರ್ಪರೇಶನದವರು ರೈತರಿಂದ ಖರೀದಿ ಮಾಡಿದ ಕಾಳಿನ ಹಣವನ್ನು ೨ ತಿಂಗಳಾದರೂ ಕೊಟ್ಟಿಲ್ಲೆಂದು ತಿಳಿಯುತ್ತದೆ.

ಜಹಗೀರ ಸರಕಾರದವರು ಕೊಪ್ಪಳದಲ್ಲಿಯ ಮಹೇಶ್ವರ ದೇವಸ್ಥಾನವನ್ನು ವಶಪಡಿಸಿಕೊಂಡು ಅದನ್ನು ಪೋಲೀಸ ಕಚೇರಿಯಾಗಿ ಮಾಡಿದ್ದರಿಂದ ಆಸ್ತಿಕರಿಗೆ ತೊಂದರೆಯಾಗಿದೆಂದು ಮೇಲಧಿಕಾರಿಗಳಲ್ಲಿ ಜನರು ದೂರಿಕೊಂಡಿರುವರು.

ರಾಷ್ಟ್ರೀಯ ಸಪ್ತಾಹ ನಿಮಿತ್ತ ರಾಯಚೂರಲ್ಲಿ ತಾ ೬ ನೇ ದಿನ ಧ್ವಜವಂದನೆ ನಡೆದು ಶ್ರೀ ಗುರುನಾಥರಾಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಶ್ರೀಗಳಾದ ಆದವಿರಾವ, ರಾ ಗು, ಜೋಶಿ ಮೊದಲಾದವರ ಭಾಷಣಗಳಾದವು.

ಹಿರಿಮಿರಜ ಶಾಸನಸಭೆಯ ಮುಂಗಡ ಪತ್ರದ ಪುರವಣಿ ಅಧಿವೇಶನವು ತಾ. ೨೪ ಕ್ಕೆ ನೆರೆಯಲಿದೆ.

ಮುಂಬಯಿ ಶಾಸನ ಸಭೆ

# ಹರಿಜನ ದೇವಾಲಯ ಪ್ರವೇಶ ಮಸೂದೆ

## ಪರಿಶೀಲಕ ಸಮಿತಿಗೆ ಒಪ್ಪಿಸಲ್ಪಟ್ಟಿತು

## ವಿವಾಹ ವಿಚ್ಛೇದ ಮಸೂದೆಯ ಸ್ವೀಕಾರ

ಮುಂಬಯಿ ಶಾಸನ ಸಭೆಯಲ್ಲಿ ತಾ. ೩ ಕ್ಕೆ ಲಾರ್ಡ ರೇ ಮಹಾರಾಷ್ಟ್ರ ಉದ್ಯೋಗಿಕ ವಸ್ತು ಸಂಗ್ರಹಾಲಯದ ಎರಡನೆ ಮತ್ತು ಮೂರನೆ ವಾಚನಗಳು ಪಾಸಾದವು.

### ವಿವಾಹ ವಿಚ್ಛೇದ ಮಸೂದೆ

ಅನಂತರ ಹಿಂದೂ ವಿವಾಹ ವಿಚ್ಛೇದ ಮಸೂದೆಯು ಎರಡನೆ ಮತ್ತು ಮೂರನೆ ವಾಚನಗಳು ಸ್ವೀಕೃತವಾದವು. ಪರಿಶೀಲಕ ಸಮಿತಿಯವರು ಅದರಲ್ಲಿ ಕೆಲ ಬದಲಾವಣೆಗಳನ್ನು ಮಾಡಿದ್ದರು. ಮಂಕುತನ, ವೇಶ್ಯಾಲಂಪಟತನಗಳನ್ನೂ ವಿಚ್ಛೇದಕ್ಕೆ ಕಾರಣಗಳನ್ನಾಗಿ ಗಣಿಸಬೇಕೆಂದೂ ಹೆಂಡತಿಯನ್ನು ಬಿಟ್ಟ ಸ್ವರ ಕಾರಣದಿಂದ ವಿಚ್ಛೇದ ಬೇಡುವದರ ಅವಧಿಯನ್ನು ೭ ವರ್ಷದಿಂದ ೪ ವರ್ಷಕ್ಕಿಳಿಸಬೇಕೆಂದೂ ೨೦ ವರ್ಷದಾಂಪತ್ಯ ಮಾಡಿದ ಮೇಲೆ ಧರ್ಮತ್ಯಾಗ, ವೇಶ್ಯಾಲಂಪಟತನ ಅಥವಾ ವ್ಯಭಿಚಾರದ ಹೊರತು ಬೇರಾವ ಕಾರಣದಿಂದಲೂ (ಹೆಂಗಸಿಗೆ) ವಿಚ್ಛೇದದ ದಾವೆ ಹೂಡಬರುವದಿಲ್ಲೆಂದೂ ಸೂಚಿಸಲಾಗಿದೆ. ಗಂಡನು ಮತಭ್ರಷ್ಟನನ್ನು ಮದುವೆಯಾಗಿದ್ದರೆ ಹೆಂಡತಿಗೆ ವಿಚ್ಛೇದ ಪಡೆಯುವ ಹಕ್ಕು ಕೊಡಲಾಗಿದೆ.

ಇದಲ್ಲದೆ ತಾ. ೩ ಕ್ಕೆ ಸರಕಾರಿ ಸಾಲ ಪತ್ರಗಳ ವ್ಯವಹಾರದ ನಿಯಮನ ಮಾಡಲು ಕೇಂದ್ರ ಸರಕಾರಕ್ಕೆ ಕೇಳಿಕೊಳ್ಳುವ ಗೊತ್ತುವಳಿ, ಮುಂಬಯಿ ನಗರ ಮ್ಯುನಸಿಪಲ್ ಕಾಯಿದೆ ತಿದ್ದುಪಡಿ ಮಸೂದೆ ಸ್ವೀಕೃತವಾದವು.

ಪ್ರಶ್ನೋತ್ತರ ಸಮಯದಲ್ಲಿ ಮಾನ್ಯ ಮುರಾರಜಿಯವರು, ರಾಷ್ಟ್ರೀಯ ಸ್ವಯಂ ಸೇವಕ ಸಂಘದವರು ಮುಸಲ್ಮಾನರ ವಿರುದ್ಧ ಹಿಂಸೆಯನ್ನು ಬೋಧಿಸುವದು ತಮಗೆ ಗೊತ್ತಿಲ್ಲವೆಂದೂ ಆದರೆ ಸಂಘದ ಸಭಾಸದರು ಸಂಗಮನೇರದಲ್ಲಿ ಮೂರು ಬಾರಿ ಮುಸ್ಲಿಮರ ಮೇಲೆ ದಾಳಿ ಮಾಡಿದರೆಂದೂ ಶ್ರೀ ಶಂಸುದ್ದೀನರಿಗೆ ತಿಳಿಸಿದರು.

ಕುಲಾಬಾ ಜಿಲ್ಲೆಯಲ್ಲಿ ಮುಸಲ್ಮಾನರ ೧೧೮,೯೫೭ ರೂಪಾಯಿಯ ಆಸ್ತಿ ನಾಶವಾಗಿದೆಯೆಂದೂ ಪರಿಹಾರದ ವಿಚಾರ ನಡೆದಿದೆಯೆಂದೂ ತಿಳಿಸಲಾಯಿತು.

### ಹರಿಜನ ದೇವಸ್ಥಾನ ಪ್ರವೇಶ

ಮುಖ್ಯ ಮಂತ್ರಿ ಬಿ. ಜಿ. ಖೇರರು ಪ್ರಾಂತದಲ್ಲಿ ದೇವಸ್ಥಾನಗಳನ್ನು ಹರಿಜನರಿಗೆ ತೆರೆಯುವ ಸಂಬಂಧದ ಮಸೂದೆಯನ್ನು ತಾ. ೩ ಕ್ಕೆ ಮಂಡಿಸಿದರು. ವಿಶ್ವಸ್ತಿಕೆಯ ಕರಾರಪತ್ರದಲ್ಲಿ ಏನೇ ಹೇಳಿದರೂ, ರೂಢಿ ಮೊದಲಾದವುಗಳು ಅಥವಾ ನ್ಯಾಯಸ್ಥಾನದ ಆಜ್ಞೆಗಳು ಏನೇ ಇರಲಿ, ಇತರ ಹಿಂದುಗಳಿಗೆ ಸಾಮಾನ್ಯವಾಗಿ ಪ್ರವೇಶವಿರುವ ದೇವಸ್ಥಾನಗಳಲ್ಲಿ ಹರಿಜನರಿಗೂ ಪ್ರವೇಶವಿರಬೇಕೆಂದೂ ಆ ದೇವಸ್ಥಾನಕ್ಕೆ ಸಂಬಂಧಿಸಿದ ಕೆರೆ ಭಾವಿ ಮೊದಲಾದವುಗಳಲ್ಲಿ ಸ್ನಾನ ಮಾಡುವ ಹಕ್ಕೂ ಇರಬೇಕೆಂದೂ ಈ ಮಸೂದೆ ವಿಧಿಸುವದು. ಮದ್ರಾಸಿನ ಕಾಯದೆಯಂತೆ ಈ ಕಾಯದೆಯನ್ನು ಮೀರಿದವರಿಗೆ ಇದು ಬರಿ ದಂಡ ಮಾತ್ರ ವಿಧಿಸದೆ ಶಿಕ್ಷೆಯನ್ನೂ ವಿಧಿಸುತ್ತದೆ. ಮತ್ತು ಈ ವಿಷಯವನ್ನು ಸಿವಿಲ್ ನ್ಯಾಯಸ್ಥಾನಗಳ ಅಧಿಕಾರ ಕ್ಷೇತ್ರದಿಂದ ಹೊರಗಿರಿಸಿದೆ.

ತಾ. ೭ ಕ್ಕೆ ಈ ಮಸೂದೆಯ ಚರ್ಚೆ ಮುಂದುವರಿದು ಅದರ ಪ್ರಥಮವಾಚನ ಸರ್ವಾನುಮತದಿಂದ ಸ್ವೀಕೃತವಾಯಿತು. ಆ ಮೇಲೆ ಅದನ್ನು ಪರಿಶೀಲಕ ಸಮಿತಿಗೊಪ್ಪಿಸುವ ನಿರ್ಣಯವಾಯಿತು. ಮುಸ್ಲಿಂ ಲೀಗ್ ಸದಸ್ಯರೂ ಶ್ರೀ ಖೇರಗೀಕರ, ಸೋನಗಾಂವಕರರೂ ಮಸೂದೆಯನ್ನು ಪರಿಶೀಲಕ ಸಮಿತಿಗೊಪ್ಪಿಸದೆ ಒಡನೆ ಸ್ವೀಕರಿಸಬೇಕೆಂದು ಒತ್ತಾಯಗೊಳಿಸಿದರು. ಆದರೆ ಮಾನ್ಯ ಖಾಸೆಯವರು ಕಾಯಿದೆಯನ್ನು ಹೆಚ್ಚು ವ್ಯಾಪಕಗೊಳಿಸುವದಕ್ಕಾಗಿಯೆ ಪರಿಶೀಲನಕ್ಕೊಪ್ಪಿಸಲಾಗಿದೆಯೆಂದು ಸಮಾಧಾನ ಹೇಳಿದರು.

### ಲೀಗಿನ ನಿಲುವಳಿ

ತಾ. ೮ ಕ್ಕೆ ಮುಸ್ಲಿಂ ಲೀಗ್ ಪಕ್ಷದ ಶ್ರೀ ಎಸ್. ಎಂ. ಹಸನರು ಈಚೆಗೆ ಮುಂಬಯಿಯಲ್ಲಿ ಪ್ರಾರಂಭವಾದ ಜಾತೀಯ ಗಲಭೆಯ ಸಂಬಂಧವಾಗಿ ನಿಲುವಳಿ ತರಲು ಪ್ರಯತ್ನಿಸಿದರು. ಆದರೆ ಅದನ್ನು ಚರ್ಚಿಸಲು ಸಭೆಯಲ್ಲಿ ೨೫ ಜನರ ಬೆಂಬಲವೂ ದೊರೆಯದುದರಿಂದ ಅಧ್ಯಕ್ಷರು ಅದಕ್ಕೆ ಅಪ್ಪಣೆ ಕೊಡಲಿಲ್ಲ.

ಆ ಮೇಲೆ ನಗರ ಮುನಸಿಪಲ್ ಕಾಯಿದೆ ತಿದ್ದುಪಡಿಯ ಸೂಚನೆಯ ಮೂರು ವಾಚನಗಳು ಸ್ವೀಕೃತವಾದವು.

ಬಳಿಕ ಒಕ್ಕಲಿಗರ ಋಣವಿಮೋಚನ ಕಾಯಿದೆಯ ಎರಡನೆ ವಾಚನ ತೆಗೆದುಕೊಳ್ಳಲಾಯಿತು. ಶ್ರೀ ಡಾಂಗೆ, ಪಲಾಲ, ಮತ್ತು ಲೀಗ್ ಸದಸ್ಯರ ೭೩ ತಿದ್ದುಪಡಿಗಳಲ್ಲಿ ಎರಡು ಮಾತ್ರ ಸ್ವೀಕರಿಸಲ್ಪಟ್ಟವು

ಕೇಂದ್ರ ಶಾಸನ ಸಭೆಯಲ್ಲಿ

# ಉತ್ಪನ್ನ ಕರ ಮಸೂದೆಯ ಸ್ವೀಕಾರ

## ಅಝಾದ ಸೈನಿಕರ ಬಿಡುಗಡೆಯ ಪ್ರಶ್ನೆ ಫೆಡರಲ್ ಕೋರ್ಟಿಗೆ ಹೋಗುವದು

### ಅಝಾದ ಸೈನಿಕರ ಬಿಡುಗಡೆಯ ಸಮಸ್ಯೆ

ಕೇಂದ್ರ ಶಾಸನ ಸಭೆಯಲ್ಲಿ ತಾ ೩ ಕ್ಕೆ ಕಾಂಗ್ರೆಸ್ ಸದಸ್ಯರಾದ ಖಾನ ಅಬ್ದುಲಗನಿಖಾನರು ಈಗ ಸೆರೆಯಲ್ಲಿರುವ ಅಝಾದ ಹಿಂದ ಸೈನಿಕರನ್ನು ಬಿಡುಗಡೆ ಮಾಡಬೇಕೆಂಬ ಗೊತ್ತುವಳಿಯೊಂದನ್ನು ತಂದರು. ಅನೇಕ ಸದಸ್ಯರು ಈ ಬಗ್ಗೆ ಮಾತಾಡಿದರು. ಮುಸ್ಲಿಂ ಲೀಗ್ ಸದಸ್ಯರು ಕೆಲವರಂತೂ ಈ ವಿಷಯದಲ್ಲಿ ಅಪೂರ್ವ ಉತ್ಸಾಹ ತೋರಿಸಿ ಈ ಸೈನಿಕರ ಬಿಡುಗಡೆಯ ಪಕ್ಷದಲ್ಲಿ ನಡುಗಾಲ ಸರಕಾರ ರಾಜೀನಾಮೆ ಕೊಡಬೇಕೆಂದು ಕೂಡ ಕೇಳಿದರು.

ಪಂ. ಜವಾಹರಲಾಲರು ಈ ಪ್ರಶ್ನೆಯಲ್ಲಿದ್ದ ತೊಡಕುಗಳನ್ನು ವಿವರಿಸಿದರು. ಮೊದಲು ಇದು ಬಹಳ ಸುಲಭವೆಂದು ತಮಗನಿಸಿದ್ದರೂ ಹಿಂದುಸ್ತಾನದ ಮುಖ್ಯ ಸೇನಾಪತಿಗಳು ಭಿನ್ನಾಭಿಪ್ರಾಯವನ್ನು ತಳೆದುದರಿಂದ ಅದು ಕಠಿಣವಾಗಿದೆಯೆಂದರು. ಸೈನ್ಯದ ದೃಷ್ಟಿಯಿಂದ ಅವರ ಅಭಿಪ್ರಾಯ ಸರಿಯಾಗಿರಬಹುದು. ಆದರೆ ಈ ಪ್ರಶ್ನೆಯ ವೈಶಿಷ್ಟ್ಯವನ್ನು ಅನಲಕ್ಷಿಸಿ ಇದೀ ಪ್ರಶ್ನೆಯನ್ನು ವರಿಷ್ಠ ನ್ಯಾಯಾಧೀಶರ ಪರಿಶೀಲನೆಗೊಪ್ಪಿಸಬೇಕೆಂದು ಸರಕಾರ ಸೂಚಿಸಿದೆಯೆಂದು ತಿಳಿಸಲಾಯಿತು.

ಗೊತ್ತುವಳಿ ಹಿಂತೆಗೆದುಕೊಳ್ಳಲ್ಪಟ್ಟಿತು.

### ಫ್ರೆಂಚರಿಗೆ ಸಹಾಯವಿಲ್ಲ

ತಾ ೭ ಕ್ಕೆ ಪಂ. ಜವಾಹರಲಾಲರು ಶ್ರೀ ಮನು ಸುಬೇದಾರ ಮತ್ತು ಗಂಗರಾಜು ಅವರಿಗೆ ಉತ್ತರ ಕೊಡುತ್ತ ಇಂಡೋಚೀನದಲ್ಲಿ ಫ್ರೆಂಚರು ನಡೆಸಿರುವ ಮಿಲಿಟರಿ ಕ್ರಮ ಕಲ್ಲಿ ಅವರಿಗೆ ಹಿಂದುಸ್ತಾನದಿಂದ ಸಹಾಯವಾಗದಂತೆ ಎಚ್ಚರಿಕೆ ವಹಿಸಲಾಗಿದೆಯೆಂದು ತಿಳಿಸಿದರು. ಬೆಂಗಳೂರಿನ ಹಿಂದುಸ್ತಾನ ವಿಮಾನ ಕಂಪನಿಗೆ ದುರಸ್ತಿಗಾಗಿ ೨೦ ಫ್ರೆಂಚ ಬಾಂಬರ ವಿಮಾನಗಳು ಬಂದಿವೆ ನಿಜವೇ ಎಂದು ಕೇಳಲಾಗಿತ್ತು, ಪಂ ಜವಾಹರರು ಅದನ್ನು ನಿರಾಕರಿಸಿ ಒಂದೆರಡು ಆಸ್ಪತ್ರಿ ವಿಮಾನಗಳನ್ನು ದುರಸ್ತಿ ಮಾಡಿಕೊಟ್ಟದ್ದು ನಿಜವೆಂದೂ ಅದನ್ನು ನಿರಾಕರಿಸುವದು ಉಚಿತವಾಗುತ್ತಿದ್ದಿಲ್ಲೆಂದೂ ತಿಳಿಸಿದರು.

### ಮಾಲಕಂದ ವಿಚಾರಣೆ

ವಿದೇಶಮಂತ್ರಿ ಜವಾಹರಲಾಲರು ಅಕ್ಟೋಬರದಲ್ಲಿ ವಾಯವ್ಯ ಗುಡ್ಡಗಾಡಿಗೆ ಭೆಟ್ಟಿ ಕೊಟ್ಟಾಗ ನಡೆದ ದುರ್ಘಟನೆಗೆ ಮಾಲಕಂದದ ಹಿಂದಿನ ರಾಜಕೀಯ ಏಜಂಟರಾದ ನವಾಬ ಶಹಬೂಬ ಅಲ್ಲಿಯವರು ಎಷ್ಟು ಮಟ್ಟಿಗೆ ಹೊಣೆಗಾರರೆಂದು ವಿಚಾರಿಸಲು ನೇಮಿಸಲ್ಪಟ್ಟ ಮದ್ರಾಸ ಹಾಯಕೋರ್ಟ ನ್ಯಾಯಾಧೀಶರಾದ ಕ್ಲಾರ್ಕರ ವರದಿ ಬಂದಿದ್ದು ಮಾಲಕಂದ ಏಜಂಟರು ನಿರ್ದೋಷಿಗಳೆಂದು ತೀರ್ಮಾನಿಸಿದ್ದಾರೆಂಬದಾಗಿ ಶ್ರೀಕೃಷ್ಣದತ್ತ ಪಾಲಿವಾಲರಿಗೆ ಪಂ. ಜವಾಹರರು ತಿಳಿಸಿದರು.

### ಇಸಫಹಾನಿಯವರ ಪ್ರಚಾರ

ಹಿಂದೀ ವ್ಯಾಪಾರಿ ಶಿಷ್ಟಮಂಡಲದ ಧುರೀಣರಾದ ಇಸಫಹಾನಿಯವರು ತೆಹರಾಣ (ಇರಾಣ)ದಲ್ಲಿ ಕೊಟ್ಟ ಹೇಳಿಕೆಯ ಮೂಲಕ ರಾಜಕೀಯ ಪ್ರಚಾರ ಮಾಡಿದ್ದನ್ನು ಚರ್ಚಿಸಲು ಶ್ರೀ ಗಂಗರಾಜು ಅವರು ತಂದ ನಿಲುವಳಿಯನ್ನು ಸರಕಾರದ ಕೆಲಸದಲ್ಲಿದ್ದಾಗ ಅವರು ಪ್ರಚಾರ ಮಾಡಿದ್ದಾರೆಂದು ಸ್ಪಷ್ಟವಾಗಿಲ್ಲವಾದುದರಿಂದ ಅಧ್ಯಕ್ಷರು ನಿಯಮಬಾಹ್ಯ ಮಾಡಿದರು.

---

### ಉತ್ಪನ್ನಕರ ಕಾಯಿದೆ

ತಾ ೭ ಕ್ಕೆ ಪರಿಶೀಲಕ ಸಮಿತಿಯ ಒಪ್ಪಿಗೆ ಪಡೆದ ಉತ್ಪನ್ನಕರ ಮತ್ತು ಅಧಿಕ ಲಾಭಕರ (ತಿದ್ದುಪಡಿ) ಮಸೂದೆ ಸ್ವೀಕರಿಸಲ್ಪಟ್ಟಿತು. ಮಸೂದೆಯ ಬಗ್ಗೆ ಬಂದ ಟೀಕೆಗಳಿಗೆ ಉತ್ತರ ಕೊಡುತ್ತ ಹಣಕಾಸಿನ ಮಂತ್ರಿ ಲಿಯಾಕತ ಅಲ್ಲಿಖಾನರು ಈ ಕರದಿಂದ ಉದ್ದಿಮೆಗಳಿಗೆ ಧಕ್ಕೆಯಾಗಿ ಉತ್ಪಾದನೆ ಕುಗ್ಗಿ ಹೋಗುವದೆಂದೂ ಲಕ್ಷಗಟ್ಟಲೆ ಕೂಲಿಕಾರರು ನಿರುದ್ಯೋಗಿಗಳಾಗುವರೆಂದೂ ಬೊಬ್ಬಿಡುವವರು ಏಕೆ ಹೀಗೆ ಮಾಡುವರೆಂಬುದು ತಮಗೆ ಗೊತ್ತಿದೆಯೆಂದರು. ಆ ಪ್ರಕರಣದ ಲಾಭ ಪಡೆದು ಕೂಲಿಕಾರರಿಂದ ಹಣ ಹಿರಿದುದನ್ನು ಈಗ ಕೈಬಿಡಬೇಕಾಗುವದೆಂದು ಅವರಿಗೆ ವ್ಯಥೆಯುಂಟಾಗಿದೆ. ಈ ಕರಕ್ಕೆ ಹಿಂದುಸ್ತಾನದಲ್ಲಿ ನೂರಕ್ಕೆ ೯೯ ಜನರ ಬೆಂಬಲವಿದೆಯೆಂದು ತಮಗೆ ಖಾತರಿಯಾದ ಭಾವನೆಯಿದೆ. ಇದು ಲಕ್ಷವಧಿ ನಾಲ್ವರಿಗಷ್ಟೆ ಅನ್ಯಾಯ ಮಾಡುವದು ಹಳೆಯ ಯಂತ್ರೋಪಕರಣಗಳನ್ನು ಮಾರಿ ಹೊಸವನ್ನು ಕೊಳ್ಳುವವರಿಗೂ ಇದು ಅನ್ಯಾಯವಾಗದಿಲ್ಲ "ಈ ಕಾಯಿದೆಯಲ್ಲಿರುವ ಲೋಪದೋಷಗಳನ್ನು ಸರಿಪಡಿಸಲು ಯೋಗ್ಯ ಸೂಚನೆ ಕೊಡುವದಕ್ಕೋಸುಗ ಒಂದು ತಜ್ಞ ಸಮಿತಿಯನ್ನು ನೇಮಿಸಲಾಗುವದೆಂದರು.

### ಉತ್ಪನ್ನಕರ ತಪಾಸಣೆ ಮಸೂದೆ

ಉತ್ಪನ್ನಕರ ಸಂಬಂಧಿಸಿದ ವಿಷಯಗಳನ್ನು ಪರಿಶೋಧಿಸುವ ಸಂಬಂಧದ ಮಸೂದೆಯ ಬಗ್ಗೆ ಪರಿಶೀಲಕ ಸಮಿತಿಯ ವರದಿಯನ್ನು ಲಿಯಾಕತ ಅಲ್ಲಿಯವರು ತಾ. ೭ ಕ್ಕೆ ಸಭೆಯ ಮುಂದಿರಿಸಿದರು. ಕರದಿಂದ ತಪ್ಪಿಸಿಕೊಂಡವರನ್ನು ಕಂಡುಹಿಡಿಯಲು ಪುಸ್ತಕಗಳು ಆಸ್ತಿ ಮೊದಲಾದವುಗಳ ತಪಾಸಣೆ ನಡೆಸುವ ಅಧಿಕಾರವನ್ನು ಕೊಡುವದೇ ಮಸೂದೆಯ ಮುಖ್ಯ ಉದ್ದೇಶವಾಗಿದೆ. ಪರಿಶೀಲಕ ಸಮಿತಿಯವರು ಇದರಲ್ಲಿ ಹಲವು ಮಹತ್ವದ ಬದಲಾವಣೆಗಳನ್ನು ಮಾಡಿದ್ದಾರೆ. ಪ್ರಕರಣಗಳ ತಪಾಸಣೆಯನ್ನು ತಪಾಸಣೆ ಮಂಡಲದವರು ತಾವಾಗಿಯೆ ಆಗಲಿ ಸರಕಾರದ ಸೂಚನೆಯ ಮೇರೆಗಾಗಲಿ ಪ್ರಾರಂಭಿಸಬಹುದು, ತಪಾಸಣೆಗೊಳಗಾದ ಮನುಷ್ಯನಿಗೆ ಸಂಬಂಧಿಸಿದ್ದ ಇತರ ವ್ಯಕ್ತಿಗಳ ಲೆಕ್ಕವನ್ನು ಅವರು ಪರೀಕ್ಷಿಸಬಹುದೆಂಬುದನ್ನು ಸರಕಾರದ ಸಂಚನೆ ಬಂದ ಪ್ರಕರಣಗಳನ್ನಷ್ಟೆ ಮಂಡಳ ತಪಾಸಬೇಕು, ದೇರಿ ಜನರು ಕರದಿಂದ ತಪ್ಪಿಸಿಕೊಂಡದ್ದು ಕಂಡುಬಂದರೆ ಪುನಃ ಸರಕಾರದಿಂದ ಅಪ್ಪಣೆ ಪಡೆದೇ ಅವರನ್ನು ತಪಾಸಿಸಬೇಕು ಎಂದು ಬದಲಿಸಲಾಗಿದೆ. ತಪಾಸಣೆಗೊಳಗಾದವರ, ವಕೀಲರನ್ನು ಕೊಡುವ, ಅಧಿಕಾರಕ್ಕೆ ಹಾಕಿದ್ದ ನಿರ್ಬಂಧವನ್ನು ತೆಗೆದುಹಾಕಲಾಗಿದ್ದು ೧೯೩೯ ರ ನಂತರದ ಕರ ತಪ್ಪಿಸಿದ ಪ್ರಕರಣಗಳನ್ನಷ್ಟೇ ತಪಾಸಬೇಕೆಂದೂ ತಪಾಸಣೆ ಮಂಡಲದ ಅಧ್ಯಕ್ಷರು ಹಾಯಕೋರ್ಟ ನ್ಯಾಯಾಧೀಶರಾಗಲಿ ಹಿಂದೆ ಆ ಪದವಿಯಲ್ಲಿದ್ದವರಾಗಲಿ ಇರಬೇಕೆಂದು ನಿರ್ಬಂಧ ಹಾಕಲಾಗಿದೆ. ಒಟ್ಟಿನಮೇಲೆ ತಪಾಸಣೆಯ ವಿಷಯದಲ್ಲಿ ಸರಕಾರಕ್ಕೆ ಮತ್ತು ಅಧಿಕಾರಿಗಳಿಗಿದ್ದ ಅಧಿಕಾರವನ್ನು ಪರಿಶೀಲಕರು ಕಡಿಮೆಮಾಡಿದ್ದಾರೆ.

### ಸೈನ್ಯದ ಹಿಂದೀಕರಣ

ತಾ ೮ ಕ್ಕೆ ಹಿಂದೀ ಸೈನ್ಯ ಮತ್ತು ಇಲ್ಲಿರುವ ಬ್ರಿಟಿಶ ಸೈನ್ಯದ ಬಗ್ಗೆ ಕೇಳಲಾದ ಪ್ರಶ್ನೆಗಳಿಗೆ ಈ ಕೆಳಗಿನ ಸ್ಪಷ್ಟೀಕರಣಗಳು ಸರಕಾರದಿಂದ ದೊರೆತವು.

❋ ಭಾರತದಲ್ಲಿ ಬ್ರಿಟಿಶ ಸೈನ್ಯವನ್ನಿಡುವ ಅವಶ್ಯಕತೆ ಅಧಿಕಾರ ವರ್ಗಾಯಿಸಿದ ಮೇಲೆ ಉಳಿಯುವದಿಲ್ಲ.

❋ ಪರದೇಶಗಳಲ್ಲಿ ನಡೆದ ಯುದ್ಧಗಳಲ್ಲಿ ಭಾಗವಹಿಸಿದ ಹಿಂದೀ ಸೈನಿಕರ ಬಗ್ಗೆ ಬ್ರಿಟಿಶ ಸರಕಾರದಿಂದ ೪೩೭,೦೨,೦೦೦ ರೂಪಾಯಿ ಬರಬೇಕಾಗಿದೆ.

❋ ೧೯೪೭–೪೮ರಲ್ಲಿ ಹಿಂದುಸ್ತಾನದಲ್ಲಿ ಬ್ರಿಟಿಶ ಸೈನ್ಯವನ್ನಿಟ್ಟುಕೊಂಡಿದ್ದರೆ ಖರ್ಚು ೧೦ ಕೋಟಿ ರೂಪಾಯಿ ಬರಬಹುದು.

❋ ಸೈನ್ಯದ ಚಲನವಲನದ ಘಟನಾತ್ಮಕ ಅಧಿಕಾರ ಗವರ್ನರ ಜನರಲ್ ಮತ್ತು ಭಾರತ ಮಂತ್ರಿಗಳ ಕೈಲಿದ್ದರೂ ನಡುಗಾಲ ಸರಕಾರದ ಸಲಹೆಯನ್ನು ಕೇಳಿಕೊಳ್ಳುವ ಆಶ್ವಾಸನ ದೊರೆತಿದೆ.

❋ ಸೈನ್ಯಪಾಲನೆಯ ಖರ್ಚು ಮುಂದಿನ ವರ್ಷ ಇದಕ್ಕಿಂತ ಹೆಚ್ಚಾಗುವದು.

❋ ಯುದ್ಧಕಾಲದ ಭಾರತದ ಸೀಮೆ ಎಷ್ಟು ದಿನಗಳವರೆಗೆ ಎಂದು ಹೇಳಲಾಗಿಲ್ಲ.

❋ ಹಿಂದುಸ್ತಾನ ಜಾಗ ಇತರ ಯುದ್ಧ ಸಾಮಗ್ರಿಗಳನ್ನು ತ ಯಾರಿಸುವ ಕಾರಖಾನೆಗಳನ್ನು ಖಾಸಗಿ ಕಂಪನಿಗಳ ವಶಕ್ಕೆ ಕೊಡದೆ ಸರಕಾರವೇ ಇಟ್ಟುಕೊಳ್ಳುವದು. ಅಂಥ ೨೩ ಕಾರಖಾನೆಗಳು ಸರಕಾರದ ಕೈಯಲ್ಲಿ ಇವೆ.

❋ ಅಹಾಳ್ಯ ಮತ್ತು ಅಕೇಶಿಯಾ ಎಂಬ ಕಪ್ಪಲುಗಳನ್ನು ಕೊಳ್ಳಬೇಕೆಂದು ಸರಕಾರದ ಆಶೆಯಿದೆ. ಈಗಿರುವ ಹಿಂದೀ ನೌಕಾಪಡೆ ಕರಾವಳಿ ರಕ್ಷಣೆಗಷ್ಟೇ ಸಮರ್ಪಕವಾಗಿರುವದರಿಂದ ಇವನ್ನು ಕೊಳ್ಳಲಾಗುವದು.

ತಾ. ೮ ಕ್ಕೆ ಪೂರೈಕೆ ಮಂತ್ರಿಗಳ ರಬ್ಬರ ಉತ್ಪಾದನೆ–ವಿಕ್ರಯ ಮಸೂದೆ ಪಾಸಾಯಿತು. ಅಲ್ಲದೆ ಕಬ್ಬಿಣ, ಉಕ್ಕು, ರೇಶ್ಮೆ, ಅರಳೆ, ಕೃತಕ ರೇಶ್ಮೆ ವಸ್ತ್ರಸಕ್ಕರೆ ಉದ್ಯೋಗಗಳಿಗೆ ಸಂರಕ್ಷಣೆ ಕೊಡುವ ಸುಂಕ ಕಾಯಿದೆ ಮತ್ತು ಸಂರಕ್ಷಣೆ ಕಾಯಿದೆ ಪಾಸಾಯಿತು.

### ಸ್ಟರ್ಲಿಂಗ್‌ನ ವಿಚ್ಛೇದ

ಹಣಕಾಸಿನ ಮಂತ್ರಿ ಲಿಯಾಕತ ಅಲ್ಲಿಯವರು ಮಂಡಿಸಿದ ರಿಝರ್ವ್ ಬ್ಯಾಂಕ್ ತಿದ್ದುಪಡಿ ಕಾಯಿದೆಯನ್ನು ಸ್ವೀಕರಿಸಿ ಶಾಸನ ಸಭೆ ಹಿಂದೀ ಹಣಕಾಸಿನ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿತು ಈ ತಿದ್ದುಪಡಿಯ ಮೂಲಕ ಹಿಂದೀ ನಾಣ್ಯ ಬ್ರಿಟಿಶ ಸ್ಟರ್ಲಿಂಗ್ ಹಣದ ಅಧೀನವಾಗಿದ್ದುದನ್ನು ಬಿಡಿಸಿ ಸ್ವತಂತ್ರವಾಗಿ ಮಾಡಿದ್ದರಿಂದ ಅನೇಕ ವರ್ಷಗಳಿಂದ ಹಿಂದುಸ್ತಾನಕ್ಕೆ ಆಗುತ್ತಿದ್ದ ಅನನುಕೂಲತೆಗಳು ದೂರವಾದಂತಾದವು. "ಇಂಥದೊಂದು ಮಸೂದೆಯಿಲ್ಲದ್ದರಿಂದಲೇ ಭಾರತದ ಅಮೂಲ್ಯ ವಸ್ತುಗಳನ್ನು ಸ್ಟರ್ಲಿಂಗ್ ಸಂಗ್ರಹ ರೂಪದಲ್ಲಿ ವಿದೇಶಿಯರು ದೋಚಿಕೊಂಡೊಯ್ದರು" ಎಂದು ಮನು ಸುಬೇದಾರರು ಸರಕಾರವನ್ನಭಿನಂದಿಸಿದರು.

### ವಿಧಿ ಮಂಡಲದಲ್ಲಿ

ತಾ ೩ ಕ್ಕೆ ಕೇಂದ್ರ ವಿಧಿ ಮಂಡಲದಲ್ಲಿ ಶ್ರೀ ಮೋತೀಲಾಲರು ಸೈನ್ಯ ಖಾತೆಯ ವೆಚ್ಚವನ್ನು ಪರಿಶೀಲಿಸಲು ಮತ್ತು ಅದರಲ್ಲಿ ಕಡಿಮೆ ಮಾಡುವ ಬಗ್ಗೆ ಸೂಚನೆ ಕೊಡಲು ಒಂದು ಸಮಿತಿ ನೇಮಿಸಬೇಕೆಂದು ತಂದ ಗೊತ್ತುವಳಿ ಯೋಗ್ಯ ಆಶ್ವಾಸನ ದೊರೆತುದರಿಂದ ಹಿಂತೆಗೆದುಕೊಳ್ಳಲ್ಪಟ್ಟಿತು.

ಶ್ರೀ ಎಚ್. ಕೆ ರಾಯ ಚೌಧರಿಯವರು ಒತ್ತಾಯದ ಮತಾಂತರ ಮತ್ತು ಮದುವೆಗಳನ್ನು ರದ್ದುಗೊಳಿಸಲು ಒಂದು ಮಸೂದೆಯನ್ನು ತಂದರು ನೌಖಾಲಿ ತಿಪ್ಪೇರಾಗಳಲ್ಲಿ ನಡೆದ ಘಟನೆಗಳನ್ನನುಲಕ್ಷಿಸಿ ಈ ಮಸೂದೆ ತರಲಾಗಿದ್ದು ೧೯೪೬ ಅಗಸ್ಟ ೧೫ನೆಯ ತಾರೀಖಿನ ನಂತರದ ಹೊಂದಿದವರಿಗೆ ಆ ಹಿಂದಿನ ಹಿಂದೂ ಹೆಂಡತಿಯ ಅಥವಾ ಗಂಡನ ಆಸ್ತಿ ಮೊದಲಾದವುಗಳಿಗೆ ಹಕ್ಕಿಲ್ಲವೆಂದು ಮೊದಲಾಗಿ ಅನುವಿಧಿಸುತ್ತದೆ.

ತಾ ೯ ಕ್ಕೆ ಶಾಸನ ಸಭೆಯಲ್ಲಿ ಮೊದಲೇ ಸ್ವೀಕೃತವಾದ ವ್ಯಾಪಾರಿ ಲಾಭಕರ ಮಸೂದೆಯನ್ನು ವಿಧಿಮಂಡಲ ಸ್ವೀಕರಿಸಿತು.

ಹಿಂದುಸ್ತಾನ ಸರಕಾರ ಇಟಲಿ, ಹಂಗರಿ, ರೂಮಾನಿಯಾ ಬಲ್ಗೇರಿಯಾ ಮತ್ತು ಫಿನ್ಲಂಡು ಈ ಹಿಂದೀ ಶತ್ರುರಾಷ್ಟ್ರಗಳೊಡನೆ ಮಾಡಿಕೊಂಡ ಒಪ್ಪಂದಕ್ಕೆ ವಿಧಿಮಂಡಲ ಮನ್ನಣೆ ಕೊಟ್ಟಿತು.

---

## ದೇವಾಲಯ ಪ್ರವೇಶ ಮಸೂದೆ

### ಮದ್ರಾಸ ಮೇಲ್ಮನೆಯಲ್ಲಿ ಪಾಸಾಯಿತು

ಮದ್ರಾಸ ಮೇಲ್ಮನೆಯಲ್ಲಿ ತಾ ೩ ನೇ ದಿನ ದೇವಾಲಯಗಳಲ್ಲಿ ಹರಿಜನರಿಗೆ ಪ್ರವೇಶವೀಯುವ ಮಸೂದೆಯು ಸ್ವೀಕೃತವಾಯಿತು. ಹರಿಜನ ವರ್ಗದ ಸಭಾಸದರಾದ ಎಚ್. ಎಂ. ಜಗನ್ನಾಥನ್ ಅವರು ಈ ಕಾಯಿದೆಯು ಕಾಂಗ್ರೆಸ ಪಕ್ಷದ ರಾಜಕೀಯ ಅಭಿಮತವಾಗಿರುವದರಿಂದ ಮಂತ್ರಿ ಮಂಡಳವನ್ನು ತಾವು ಅಭಿನಂದಿಸುವದಿಲ್ಲೆಂದು ಹೇಳಿ ಈಗ ತುರ್ತಾಗಿ ರೊಟ್ಟಿ ಬೆಣ್ಣೆ ಬೇಕೆಂದು ನುಡಿದರು.

ಧುರೀಣರಾದ ತಾ. ರಾಜನವರು ಚರ್ಚೆಗೆ ಉತ್ತರಕೊಡುತ್ತ ದೇವಾಲಯಗಳಲ್ಲಿಯ ಅಸ್ಪೃಶ್ಯತೆ ನಿರ್ಮೂಲನ ಮಾಡಿದರೆ ವರ್ಗ ಪದ್ಧತಿಯು ಕ್ರಮವಾಗಿ ಅಳಿದು ಹೋಗುವದೆಂದೂ ಮಸೂದೆಯಲ್ಲಿ ಹರಿಜನರಿಗೆ ಹಿಂದುಗಳಿಗಿರುವ ಎಲ್ಲ ಅಧಿಕಾರವನ್ನು ಕೊಡಲಾಗಿದೆಯೆಂದೂ ಹೇಳಿದರು. ಅಧ್ಯಕ್ಷರ ಸಂಬಳವನ್ನು ೫೦೦ ರೂಪಾಯಿಗೆ ಇಳಿಸುವ ಮಸೂದೆಯೂ ಸಭೆಯಲ್ಲಿ ಸ್ವೀಕೃತವಾಯಿತು.

## ಮಿರ್ಜಿಯಲ್ಲಿ ರಾಜಕೀಯ ಸುಧಾರಣೆಗಳು

ಶ್ರೀ ಮಿರ್ಜಿಯ ರಾಜಾಸಾಹೇಬರು ತಮ್ಮ ಸಂಸ್ಥಾನದಲ್ಲಿ ಕೆಲ ಹೊಸ ರಾಜಕೀಯ ಸುಧಾರಣೆಗಳನ್ನು ಜಾಹೀರು ಪಡಿಸಿದ್ದಾರೆ. ಇವನ್ನು ಯು ಪ್ರಜೆಗಳಿಗೆ ಹೆಚ್ಚಿನ ಅಧಿಕಾರ ದಯಪಾಲಿಸಲಾಗುವದು. ಅದರ ರೂಪರೇಷೆ ಹೀಗಿದೆ:

ಈ ಸುಧಾರಣೆಗಳು ದಕ್ಷಿಣ ಸಂಸ್ಥಾನದ ಒಕ್ಕೂಟ ಯೋಜನೆ ಅಮಲಿಗೆ ಬರುವ ವರೆಗೆ ಜಾರಿಯಲ್ಲಿರುವವು.

ಸಂಸ್ಥಾನದ ಮಂತ್ರಿ ಮಂಡಲದಲ್ಲಿ ದಿವಾನರಲ್ಲದೆ ಇಬ್ಬರು ಮಂತ್ರಿಗಳನ್ನು ನೇಮಿಸಲಾಗುವದು. ಅದಕ್ಕೂ ಮುಖ್ಯ ಸುಶಿಕ್ಷಿತ ಜನಪ್ರಿಯರಾಗಿರುವ ಮತ್ತು ಶಾಸನ ಸಭಾ ಸದಸ್ಯರಾಗಿರುವವರನ್ನು ಮಂತ್ರಿಗಳಾಗಿ ಆರಿಸಲಾಗುವದು. ಅವರು ಶಾಸನ ಸಭೆಗೆ ಹೊಣೆಗಾರರಿದ್ದು ಅವಿಶ್ವಾಸ ಗೊತ್ತುವಳಿ ಪಾಸಾದರೆ ರಾಜೀನಾಮೆ ಕೊಡಬೇಕು.

ಶಾಸನ ಸಭೆಯ ಎಲ್ಲ ಸದಸ್ಯರು ಪ್ರಜಾ ಪ್ರತಿನಿಧಿಗಳಾಗಿರುವರು. ಅಧ್ಯಕ್ಷನನ್ನು ಆರಿಸುವ ಮತ್ತು ಮಂತ್ರಿಗಳ ಸಂಬಳ ಗೊತ್ತುಪಡಿಸುವ ಹಕ್ಕು ಅವರಿಗಿದೆ.

ಕಾದಿಟ್ಟ ವಿಷಯಗಳು ಮತ್ತು ವಿಶೇಷಾಧಿಕಾರಗಳು ಮಹಾರಾಜರಿಗೆ ಸೇರಿದ್ದು ಅವುಗಳ ಮೇಲೆ ಮಂತ್ರಿಗಳ ಅಥವಾ ಶಾಸನ ಸಭೆಯ ಹಕ್ಕಿಲ್ಲ. ಕಾದಿಟ್ಟ ವಿಷಯಗಳಲ್ಲಿ ಸಂರಕ್ಷಣ, ಬಾಹ್ಯ ವಿಷಯ, ರಾಜಕುಟುಂಬದ ಮತ್ತು ಮಹಾರಾಜರ ಖಾಸಗಿ ವೆಚ್ಚದ ವಿಷಯ ಮೊದಲಾದವುಗಳು, ವಿಶೇಷಾಧಿಕಾರಗಳಲ್ಲಿ ಕಠಿನ ಪರಿಸ್ಥಿತಿಯಲ್ಲಿ ಸುಗ್ರೀವಾಜ್ಞೆ ಹೊರಡಿಸುವದು, ಆಡಳಿತ ಯಂತ್ರ ಸಾಗದಂತೆ ಕಂಡರೆ ಸ್ವತಃ ಅಧಿಕಾರ ವಹಿಸುವದು, ಸಂಸ್ಥಾನದ ದರ್ಜೆ ಮತ್ತು ಆರ್ಥಿಕ ಸುಸ್ಥಿತಿಯನ್ನು ಕಾಯ್ದುಕೊಳ್ಳುವದು, ದಿವಾಣ, ಹಾಯಕೋರ್ಟ ನ್ಯಾಯಾಧೀಶ, ಜಿಲ್ಲಾ ನ್ಯಾಯಾಧೀಶರ ನೇಮಕ, ನೌಕರಿ ಆಯ್ಕೆ ಮಂಡಲದ ನೇಮಕ ಇವು ಬರುವವು.

ಸಧ್ಯದ ಶಾಸನ ಸಭೆ ೧೯೪೭ ನವೆಂಬರದಲ್ಲಿ ವಿಸರ್ಜಿಸಲ್ಪಟ್ಟು ಹೊಸ ಚುನಾವಣೆಗಳಾಗುವವು.

## ಕಾರವಾರದಲ್ಲಿ ರೇವು ಸಮಿತಿ
### ಶ್ರೀ ಮಾಸ್ತರರ ಭಾಷಣ

ಕಾರವಾರದಲ್ಲಿ ವಿವಿಧ ಸ್ಥಾನಿಕ ಸಂಸ್ಥೆಗಳು ತಮಗೆ ಅರ್ಪಿಸಿದ ಬಿನ್ನವತ್ತಳೆಗಳಿಗೆ ಉತ್ತರ ಕೊಡುತ್ತ ಹಿಂದುಸ್ಥಾನ ವಹಕ್ ಸಂಘದ ಅಧ್ಯಕ್ಷರೂ ರೇವು ಸಮಿತಿಯ ಅಧ್ಯಕ್ಷರೂ ಆದ ಶ್ರೀ ಎಂ ಎ ಮಾಸ್ತರರು ಹಿಂದುಸ್ಥಾನ ಸರಕಾರದ ಈಗಿನ ಧೋರಣವನ್ನು ಟೀಕಿಸಿದರು. ಹಿಂದುಸ್ಥಾನ ಸರಕಾರದ "ಹಿಂದೀನೌಕಾ ಉದ್ಯೋಗ"ದ ವ್ಯಾಖ್ಯೆಯನ್ನೂ ಟೀಕಿಸಿದರು. ಅವರು ಇನ್ನೂ ಹೇಳಿದ್ದೇನೆಂದರೆ—

ಹಿಂದೀ ನೌಕಾ ಉದ್ಯೋಗವೆಂದರೆ, ಹಿಂದೀಯರೆ ಮತ್ತು ಹಿಂದೀಯರ ನಿಯಂತ್ರಣ ಮತ್ತು ಆಡಳಿತಕ್ಕೆ ಒಳಗಾದ ಉದ್ಯೋಗವೆಂದು ಅರ್ಥವಾಗಬೇಕು. ಇದರಲ್ಲಿ ಹಿಂದೀನೌಕಾ ಉದ್ಯೋಗದಲ್ಲಿ ತೊಡಗಿದ ಬ್ರಿಟಿಶರ ಸ್ಪರ್ಧೆಯಾಗಬಾರದು. ಸಧ್ಯದ ವ್ಯಾಖ್ಯೆಯಿಂದ ಇವರೂ ಅದರಲ್ಲಿ ಸೇರಡೆ ಹೊಂದುತ್ತಾರೆ. ಇನ್ನೂ ೨೫ ವರ್ಷ ಇದೇ ವ್ಯಾಖ್ಯೆಯು ಅಮಲಿನಲ್ಲಿರುವದೆಂದು ತಿಳಿಯುತ್ತದೆ. ಈ ವ್ಯಾಖ್ಯೆಯನ್ನು ಸ್ವೀಕರಿಸುವದೆಂದರೆ ಹಿಂದೀ ನೌಕಾ ಉದ್ಯೋಗದ ಬೆನ್ನಲ್ಲಿ ಚೂರಿ ತಿವಿದಂತೆ.

ಕಾರವಾರ ಬಂದರ

ಕಾರವಾರ ಬಂದರದ ಬೆಳವಣಿಗೆಯ ಆವಶ್ಯಕತೆಯ ಬಗ್ಗೆ ಕೇಳಲಾದ ಪ್ರಶ್ನೆಗೆ ಉತ್ತರ ಕೊಡುತ್ತ ಅವರು ತಮ್ಮ ಸಮಿತಿಯವರು ರಾಷ್ಟ್ರೀಯ ಹಿತದ ದೃಷ್ಟಿಯನ್ನು ತಮ್ಮ ಮುಂದೆ ಇಟ್ಟುಕೊಂಡು ಆರ್ಥಿಕ ಸೌಕರ್ಯ ವಿಷಯಕ ಮತ್ತು ಅನುಕೂಲತೆಯ ಸ್ಥಾನ ಈ ಎಲ್ಲ ದೃಷ್ಟಿಗಳಿಂದ ಸೂಚಿಸಲ್ಪಟ್ಟ ಸ್ಥಳಗಳ ಯೋಗ್ಯಾಯೋಗ್ಯತೆಯನ್ನು ಪರಿಶೀಲಿಸುವರು ಎಂದು ಹೇಳಿದರು. ಕಾರವಾರವನ್ನು ಕಡೆಗಣಿಸುವದಿಲ್ಲವೆಂದು ಅವರು ಆಶ್ವಾಸನ ಕೊಟ್ಟರು.

ಈ ಮೊದಲು ರೇವು ಸಮಿತಿಯವರು ಕಾರವಾರದ ವ್ಯಾಪಾರಸ್ಥರ ಐದಾರು ಶಿಷ್ಟಮಂಡಳಗಳಿಗೆ ಸಂದರ್ಶನವನ್ನು ಕೊಟ್ಟರು. ಈ ಶಿಷ್ಟಮಂಡಳದವರು ಕಾರವಾರವನ್ನೆ ಮುಖ್ಯ ಬಂದರವನ್ನಾಗಿ ಅಭಿವೃದ್ಧಿಗೊಳಿಸಬೇಕೆಂದು ಪ್ರತಿಪಾದಿಸಿದರು. ಕಾರವಾರದ ನೈಸರ್ಗಿಕ ಸ್ಥಾನವನ್ನು ಪರಿಶೀಲಿಸಿ ಅದು ಕೋಚಿನ ಮತ್ತು ಮುಂಬಯಿ ಮಧ್ಯದಲ್ಲಿದೆಂದೂ ಭಟಕಳವು ಕೇವಲ ಮೈಸೂರ ಸಂಸ್ಥಾನಕ್ಕೆ ಉಪಯೋಗವಾಗಬಹುದು; ಕಾರವಾರವು ಸಮಸ್ತ ಮುಂಬಯಿ ಕರ್ನಾಟಕಕ್ಕೆ ಉಪಯೋಗವಾಗುವದೆಂದೂ ಅವರು ಸಮಿತಿಯವರ ಮುಂದೆ ಹೇಳಿದರು.

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ತಾ. ೯

ಮುಂಬಯಿ ಪೇಟೆಯಲ್ಲಿ ಕಳೆದ ವಾರವೆಲ್ಲ ಸ್ವಾಭ ಪೇಟೆ ಮುಚ್ಚಿಯೆ ಇತ್ತೆಂದು ಹೇಳಬಹುದು. ಈ ವಾರಾರಂಭದಲ್ಲಿ ಕೇವಲ ಬ್ಯಾಂಕ್ ಮತ್ತು ಕೆಲ ಚಿಲ್ಲರೆ ಜವಳಿ ಗಿರಣಿ ಪಾಲುಗಳಲ್ಲಿ ವ್ಯಾಪಾರ ಆರಂಭವಾಗಿದೆ. ತೇಗೆಗಳನ್ನು ಇಳಿಸಿದ್ದರಿಂದಲೂ ಪೇಟೆಯಲ್ಲಿ ಪುನಃ ಧೈರ್ಯ ಸ್ಥಾಪಿತವಾಗಲಿಲ್ಲ. ಸಂಪುಗಳು, ರಾಜಕೀಯ ಅನಿಶ್ಚಿತತೆ, ತೆರಿಗೆಯಿಂದ ತಪ್ಪಿಸಿಕೊಳ್ಳುವವರನ್ನು ಹಿಡಿಯುವ ಕಾಯಿದೆ ಮೊದಲಾದ ಅನೇಕ ಭಾವೀ ಗಂಡಾಂತರದ ಭೀತಿಗಳಿಂದ ಹಣ ತೊಡಗಿಸುವವರ ದಿಟ್ಟತನ ಅಳಿದುಹೋಗಿದೆ. ಇದ್ದ ಬಿದ್ದ ಪಾಲುಗಳ ವ್ಯಾಪಾರವೂ ಅಷ್ಟೊಂದು ಉತ್ತೇಜನಕರವಾಗಿಲ್ಲ. ಸೆಂಟ್ರಲ ಬ್ಯಾಂಕು ೧೦೪-೨-೦ ಯಿಂದ ೧೦೦-೮-೦ ವರೆಗೆ ಇಳಿದು ಹೋಯಿತು. ಇಂಪೀರಿಯಲ್ ಏಸ್. ಸಿ. ೨೨೯೫—೦—೦ ರಿಂದ ೨೨೭೫—೦—೦ ಕ್ಕೂ ರಿಝುವರ್ ೧೧೭—೦—೦ ರಲ್ಲಿ ಇದ್ದ ಕ್ರಿಡ್ಡಂತೆಯೂ ಕಾಣಬಂತು. ಪೇಟೆಯಲ್ಲಿದ್ದ ಜವಳಿ ಪಾಲುಗಳು ನಿಷ್ಕ್ರಿಯವಾಗಿದ್ದವೆನ್ನಬಹುದು.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ನೋಟು ೧೦೧—೮—೦ ರಿಂದ ೧೦೮—೧೦—೦ ಕ್ಕೂ ೧೯೪೭—೫೦ ರ ಸಾಲ ೧೦೧—೮—೦ ರಲ್ಲಿ ಯಥಾಸ್ಥಿತಿಯೂ ಇವೆ.

### ಚಿನ್ನ ಬೆಳ್ಳಿ

ಚಿನಿವಾರ ಕಟ್ಟೆಯಲ್ಲಿ ಬೆಲೆಗಳು ಒಳ್ಳೆ ಗಡುಸಾಗಿಯೆ ಇವೆ. ಚಿನ್ನವನ್ನು ಮಾತ್ರವಲ್ಲ ಅಭರಣಗಳನ್ನು ಕೂಡ ಪರದೇಶಗಳಿಂದ ಆಯಾತ ಮಾಡಲು ಸರಕಾರ ಪ್ರತಿಬಂಧವೊಡ್ಡಿದೆ. ಪೇಟೆಗೆ ಬಂದ ಸಂಗ್ರಹವನ್ನೆಲ್ಲ ಲಾಭಬಡಕರು ಕೊಂಡು ಒಳಗಿಡುತಿದ್ದಾರೆ. ಯಾರೂ ಮಾರುವ ಮನಸ್ಸು ಮಾಡುವದಿಲ್ಲ. ಬೆಳ್ಳಿ ಪರವಾನಿಗಿ ನಿಯಂತ್ರಣ ಧಾರಣೆಯನ್ನು ಹಲವಾರಿ ಮುಟ್ಟಿದ್ದರಿಂದ ವ್ಯಾಪಾರ ನಿಲ್ಲಿಸಬೇಕಾಯಿತು. ಹಜರ (ತಯಾರಿ) ಬೆಳ್ಳಿ ರೂ. ೧೬೪-೮-೦ ರ ವರೆಗೇರಿ ೧೬೧-೪-೦ ಕ್ಕೆ ಬಂದರೂ ಮತ್ತೆ ೧೬೨-೮-೦ ಕ್ಕೇರಿತು. ವಾಯದಾ ೧೬೦—೬—೦ ಚಿನ್ನ (ಹಜರ) ಅಂತೂ ೧೦೩—೮—೦ ಯಿಂದ ೧೦೪—೮—೦ ಗೆ ಹೋಯಿತು. ವಾಯದಾ ೧೦೪—೫—೦ ಸಾವರೀನ ೬೮—೮—೦

### ಅರಳೆ ಪೇಟೆ

ಅರಳೇ ಪೇಟೆಯಲ್ಲಿ ಮತ್ತೆ ಅಸ್ಥಿರವಿಲ್ಲದಂತಾಗಿ ಬೆಲೆಗಳು ಕನಿಷ್ಠ ನಿಯಂತ್ರಿತ ಮಟ್ಟಕ್ಕೆ ಇಳಿದವು. ಮೇ ಅರಳೆ ಕಳೆದ ವಾರ ೪೩೮-೦-೦ ಕ್ಕಿದ್ದುದು ಈಗ ೪೩೦—೦—೦ ರ ಸುತ್ತ ತಿರುಗುತಿದೆ. ಜುಲೈ ೪೪೨—೧೨—೦ ಸೆಪ್ಟೆಂಬರ ೪೫೧—೧೫—೦

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೫೪-೦-೦ |
| ಅಗಸಿ | ೨೮-೨-೦ |
| ಅಗಸಿ ಎಣ್ಣೆ | ೧೯-೦-೦ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ಕ್ಕೆ | ೫೧-೫೨ |
| " " ೨ | ೪೮-೫೦ |
| ರಾಮು ಚಂದ್ರಾಪೂರ | ೪೫-೪೮ |
| ಅನ್ನಾವರಂ | ೪೦-೪೪ |
| ರಾಜ ಅಲವು | ೪೭-೫೦ |
| ನುಲಿ | ೪೬-೪೯ |
| ಬೆಟ್ಟ ವಂತಿ | ೩೪-೩೫ |
| ಬೆಟ್ಟ | ೨೯-೩೨ |
| ಕೊರಸಾಲು | ೪೭-೪೮ |

### ಸಾಂಗಲಿ ಪೇಟೆ

| | |
|---|---|
| ಅರಿಷಣ ಹೇರು | ೮೮-೯೬ |
| ಮೆಣಸಿನಕಾಯಿ ಹೇರು ,, | ೧೩೦-೧೮೦ |
| ಶೇಂಗಾ ಖಂಡಿ | ೧೩೦ |

### ಹುಬ್ಬಳ್ಳಿ ಪೇಟೆ

| | |
|---|---|
| ಹೊಸ ಜಯವಂತ ಹತ್ತಿ | ೨೨೫-೨೫೧ |
| ಹಳೆ ,, | ೨೭೦-೨೭೫ |
| ಹೊಸ ಹಳೆ ಅಪ್ಲಂಡ ಹತ್ತಿ | ೨೫೫-೨೬೫ |
| ಹಳೆ ಜಿನ | ೧೬೦-೧೭೦ |
| ಹಳೆ ಡಬಲರೋಲ | ೧೫೫-೧೬೫ |

## ಬೆಂಗಳೂರು-ಮೈಸೂರು

ಮೈಸೂರು ಸಂಸ್ಥಾನದಲ್ಲಿ ಜಲ ವಿದ್ಯುತ್ ಯೋಜನೆಗಳನ್ನು ಅಭ್ಯಸಿಸುವದಕ್ಕಾಗಿ ಮಧ್ಯಪ್ರಾಂತದ ಅಭಿವೃದ್ಧಿ ಮಂತ್ರಿಗಳಾದ ಶ್ರೀ ಡಿ. ಪಿ. ಮಿಶ್ರರು ಬೆಂಗಳೂರಿಗೆ ಬಂದಿದ್ದಾರೆ. ಅವರು ಔದ್ಯೋಗಿಕ ನಿರ್ದೇಶಕ ಹಾಗು ಉಪಮಂತ್ರಿಗಳೊಡನೆ ೧೦ ದಿನ ಸಂಸ್ಥಾನದಲ್ಲಿ ಸಂಚರಿಸುವರು. ಮಧ್ಯಪ್ರಾಂತದಲ್ಲಿ ಯುದ್ಧೋತ್ತರ ಯೋಜನೆಗಾಗಿ ೫೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲು ನಿರ್ಧರಿಸಲಾಗಿದೆ.

ಎಪ್ರಿಲ ೧೧—೨೨ ಕ್ಕೆ ದಿಲ್ಲಿಯಲ್ಲಿ ಸೇರಲಿರುವ ಅ. ಭಾ. ತ್ರಿಪಕ್ಷ ಕೂಲಿಕಾರ ಸಮ್ಮೇಲನದಲ್ಲಿ ಮೈಸೂರು ಸಂಸ್ಥಾನದ ಕಾಯದೆ ಮಂತ್ರಿಗಳಾದ ಶ್ರೀ ಓ ಎಸ್ ಶರೀಫರೂ ಉದ್ಯೋಗ ವಾಣಿಜ್ಯ ನಿರ್ದೇಶಕರಾದ ಅಪ್ಪಾದೊರೆ ಮೊದಲಿಯಾರರೂ ಭಾಗವಹಿಸುವರು.

ನಂಜನಗೂಡಿನ ರಥೋತ್ಸವ ಕಾಲದಲ್ಲಿ ರಥದಿಂದ ಭಕ್ತರು ಎಸೆಯುತ್ತಿದ್ದ ಹಣ್ಣು ರೊಕ್ಕಗಳನ್ನು ಆರಿಸಲು ಜನರು ನುಗ್ಗುತಿದ್ದಾಗ್ಗೆ ನಾಲ್ಕು ಜನರು ರಥದ ಗಾಲಿಗಳಡಿ ಸಿಲುಕಿದರೆಂದೂ ಅವರಲ್ಲಿಬ್ಬರು ತಕ್ಷಣ ಸತ್ತರೆಂದೂ ಉಳಿದವರು ಆಸ್ಪತ್ರೆ ಸೇರಿದ್ದಾರೆಂದೂ ತಿಳಿಯುತ್ತದೆ.

ಹೊಳೆನರಸೀಪುರ ನಗರ ಕ್ಷೇತ್ರದಿಂದ ಪ್ರಜಾಪ್ರತಿನಿಧಿ ಸಭೆಗೆ ಆರಿಸಿ ಹೋಗಿದ್ದ ಶ್ರೀ ಕುಂದೇರಾಯ ಶೆಟ್ಟರ ಆಯ್ಕೆಯ ವಿರುದ್ಧ ಶ್ರೀ ಎಸ್. ಸಿ ಸೂರ್ಯನಾರಾಯಣ ಶೆಟ್ಟರು ಕೊಟ್ಟ ತಕರಾರು ಅರ್ಜಿಯನ್ನು ಅಂಗೀಕರಿಸಿ ಮೈಸೂರು ಜಿಲ್ಲಾ ಜಡ್ಜರೂ ಚುನಾವಣೆ ಅಧಿಕಾರಿಗಳೂ ಆದ ಶ್ರೀ ಬಿ. ಆರ್. ರಾಮಲಿಂಗಯ್ಯನವರು ಪುನಃ ಚುನಾವಣೆಗೆ ಆಜ್ಞೆಯಿತ್ತಿದ್ದಾರೆ.

ಜಿಲ್ಲಾ ಕಾಂಗ್ರೆಸ ಸಮಿತಿಗಳ ಅಧ್ಯಕ್ಷರು ಕಾರ್ಯದರ್ಶಿಗಳ ಮತ್ತು ಆಡಹಾಕ ಸಮಿತಿಗಳ ಪ್ರತಿನಿಧಿಗಳ ಸಭೆಯೊಂದು ಬೆಂಗಳೂರಲ್ಲಿ ತಾ. ೬ ಕ್ಕೆ ಕಾಂಗ್ರೆಸ್ ಕೇಂದ್ರ ಕಚೇರಿಯಲ್ಲಿ ಸೇರಿ ಸತ್ಯಾಗ್ರಹ ನಿರ್ಣಯವನ್ನು ಆಚರಣೆಗೆ ತರುವ ವಿಧಾನಗಳನ್ನೂ ಮುಂಬರುವ ಜಿಲ್ಲಾ ಬೋರ್ಡ ಚುನಾವಣೆಗಳಲ್ಲಿ ನಡೆಸಬೇಕಾದ ಕಾರ್ಯವನ್ನೂ ಚರ್ಚಿಸಿತು. ಮೈಸೂರು ಕಾಂಗ್ರೆಸ್ ಅಧ್ಯಕ್ಷರು ವಿವಿಧ ಪ್ರದೇಶಗಳಲ್ಲಿ ಸಂಚರಿಸಬೇಕೆಂದು ನಿರ್ಣಯಿಸಲ್ಪಟ್ಟು ಆ ಬಗ್ಗೆ ಕಾರ್ಯಕ್ರಮ ಸಿದ್ಧವಾಗಿದೆ.

ಮೈಸೂರು ಕಾಂಗ್ರೆಸ್ಸಿನ ಸತ್ಯಾಗ್ರಹ ನಿರ್ಣಯಕ್ಕೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯೂ ಕೊಚ್ಚಿ ಸಂಸ್ಥಾನ ಕಾಂಗ್ರೆಸ್ಸೂ ಮದ್ರಾಸ ಕೋಟೆ ಕಾಂಗ್ರೆಸ್ಸೂ ಬೆಂಬಲ ಕೊಟ್ಟವೆಯೆಂದು ತಿಳಿಯುತ್ತದೆ.

## ದಕ್ಷಿಣ ಕನ್ನಡ

ತಾ ೬ಕ್ಕೆ ದಕ್ಷಿಣ ಕನ್ನಡ ಜಿಲ್ಲಾ ಪಂಡಿತ ಸಂಘದವರು ಉಡುಪಿಯಲ್ಲಿ ಕರ್ನಾಟಕ ಸಂಘದ ಆಶ್ರಯದಲ್ಲಿ ಕವಿಮುದ್ದಣನ ಸ್ಮಾರಕೋತ್ಸವವನ್ನು ಆಚರಿಸಿದರು. ಶ್ರೀ ಸೇಡಿಯಾಪು ಕೃಷ್ಣಭಟ್ಟರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ರಾಮರಾವ ಪಿತ್ರೆ, ಕುಪ್ಪಣ್ಣಾಚಾರ್ಯ, ಪಿ. ಕೆ. ನಾರಾಯಣ, ಟಿ. ಗೋಪಾಲಕೃಷ್ಣ ಭಟ್ಟ, ಯದುಕುಳ ಶಂಭುಭಟ್ಟ ಮೊದಲಾದವರು ಕವಿಯ ವಿಷಯದಲ್ಲಿ ಭಾಷಣ ಮಾಡಿದರು. ಶ್ರೀ ಕೊರಡಕಲ್ ಶ್ರೀನಿವಾಸರಾಯರು ಧನ್ಯವಾದ ಅರ್ಪಿಸಿದರು.

ಮಂಗಳೂರಿನ ಇಂದ್ರಭವನ ಕಾಫಿ ಹಾಟೆಲಿನಲ್ಲಿ ತಾ ೧೯ಕ್ಕೆ ಇಬ್ಬರು ಕೆಲಸಗಾರರನ್ನು ತಳ್ಳಿಹಾಕಿದ್ದಕ್ಕಾಗಿ ನೌಕರರು ಸಂಪು ಹೂಡಿದ್ದರು. ಒಡೆಯರು ಅವರನ್ನು ತಿರುಗಿ ತೆಗೆದುಕೊಳ್ಳಲೊಪ್ಪಿದ್ದರಿಂದ ಕೆಲಸಗಾರರು ತಿರುಗಿ ಕೆಲಸಕ್ಕೆ ಬಂದರು.

ದಕ್ಷಿಣ ಕನ್ನಡ ಮೊಕ್ಕರ ಅಥವಾ ಕಲಾಲರಿ ಶ್ರೀ ರಾಮಸೇವಾ ಸಂಘದ ವಾರ್ಷಿಕೋತ್ಸವ ಮಂಗಳೂರಲ್ಲಿ ತಾ ೩೦ಕ್ಕೆ ನೆರವೇರಿತು. ಮದ್ರಾಸ ಸಂಸ್ಥಾನದ ವಿವಿಧಭಾಗಗಳಿಂದ ಸಮಾಜ ಬಂಧುಗಳು ಬಂದಿದ್ದರು.

## ಬೆಂಗಳೂರು ಗಲಭೆಗಳು
### ಪೂರ್ಣ ಹಿಡಿತಕ್ಕೆ ತರಲಾಗಿದೆ

ಕಳೆದವಾರ ಹಿಂದೂ ದೇವರ ಮೆರವಣಿಗೆ ಮಸೀದೆಯೊಂದರ ಮುಂದೆ ಹಾಯ್ದು ಹೋಗುವಾಗ ಉಂಟಾದ ವಿವಾದದಿಂದ ಪ್ರಾರಂಭವಾದ ಗಲಭೆ ಈಗ ಸಂಪೂರ್ಣ ಹಿಡಿತಕ್ಕೆ ಬಂದಿದ್ದು ದೈನಂದಿನ ವ್ಯವಹಾರಗಳು ಎಂದಿನಂತೆ ಸಾಗಿವೆ. ರಾತ್ರಿ ಒಂಭತ್ತರಿಂದ ಬೆಳಗಿನ ೫ ರ ವರೆಗೆ ಕರ್ಫ್ಯೂ ಆಜ್ಞೆ ಜಾರಿಯಲ್ಲಿದೆ.

ತಾ ೮ಕ್ಕೆ ಸರಕಾರದವರು ಹೊರಡಿಸಿದ ಹೇಳಿಕೆಯಲ್ಲಿ ಗಲಭೆಯ ಸಂಬಂಧದಲ್ಲಿ ೨೧೩ ಜನರನ್ನು ಮುಂಜಾಗ್ರತೆಗಾಗಿ ಸಾರ್ವಜನಿಕ ಸುರಕ್ಷತೆ ಕಾಯದೆಯನ್ವಯ ಸೆರೆಯಲ್ಲಿಡಲಾಗಿದೆಂದೂ ಇತರ ನಾನಾ ಅಪಾದನೆಗಳ ಮೇಲೆ ೬೦ ಜನರು ಬಂಧನದಲ್ಲಿದ್ದಾರೆಂದೂ ತಿಳಿಸಲಾಗಿದೆ.

ಸಾರ್ವಜನಿಕ ಸುರಕ್ಷಿತತೆಯ ಕಾಯದೆಯನ್ವಯ ಸೆರೆಹಿಡಿಯಲ್ಪಟ್ಟವರಲ್ಲಿ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರೂ ನಗರ ಸಭಾಸದಸ್ಯರೂ ಆದ ಶ್ರೀ ಎಂ. ಕೃಷ್ಣಸ್ವಾಮಿ ಪಿಳ್ಳೆಯವರೂ ಒಬ್ಬರು. ಮೈಸೂರು ರಸ್ತೆಯಲ್ಲಿರುವ ಶ್ರೀ ಬಾಬಾ ಹಾಗು ಅವರ ಮೂವರು ಮಕ್ಕಳನ್ನೂ ಬಂಧಿಸಲಾಗಿದೆ.

ಗಲಭೆಯ ಕಾಲದಲ್ಲಿ ಅನೇಕ ಇರಿತದ ಪ್ರಕರಣಗಳೂ ಇಟ್ಟಿಗೆ ತೂರಾಟಗಳೂ ನಡೆದವು. ತಾ ೫ಕ್ಕೆ ಮಲ್ಲೇಶ್ವರದಲ್ಲಿ ಒಂದು ಮುಸ್ಲಿಮರದೆಂದು ಹೇಳಲಾದ ಮನೆಯಿಂದ ಗುಂಡುಹಾರಿ ಒಬ್ಬ ಬಾಲಕನು ಮೃತನಾದುದಲ್ಲದೆ ಹಲವರಿಗೆ ಗಾಯವಾಯಿತು. ಸತ್ತವರ ಮತ್ತು ಗಾಯಗೊಂಡವರ ಕೊನೆಯ ಅಂಕೆ ಇನ್ನೂ ಪ್ರಸಿದ್ಧವಾಗಿಲ್ಲ.

ಪೋಲೀಸರ ಮತ್ತು ಸೈನಿಕರ ಕಾವಲು ಪ್ರಬಲವಾಗಿದ್ದು ಪರಿಸ್ಥಿತಿಯನ್ನು ಹಿಡಿತಕ್ಕೆ ತರಲು ಸಾಧ್ಯವಾಯಿತು.

೫ ನೇ ತಾರೀಕು ಶನಿವಾರ ರಾತ್ರಿ ವಾಡಿಕೆಯಂತೆ ಜರುಗಬೇಕಾಗಿದ್ದ ಕರಗ ಉತ್ಸವದ ಮೆರವಣಿಗೆಗೆ ಮೊದಲು ಸರಕಾರದವರು ಅನುಮತಿ ಕೊಡದಿದ್ದರೂ ಕೊನೆಗೆ ಧರ್ಮರಾಯ ದೇವಸ್ಥಾನದಲ್ಲಿ ಪೂಜೆಯಾಗಿದ ಬಳಿಕ ದೊಡ್ಡ ಪೇಟಿ ಚೌಕದ ವರೆಗೆ ಮಾತ್ರ ಮೆರವಣಿಗೆ ಒಯ್ಯಲು ಅಪ್ಪಣೆ ಕೊಡಲಾಯಿತು. ಕರ್ಫ್ಯೂ ವೇಳೆಯಲ್ಲಿಯೆ ಮರವಣಿಗೆ ನಡೆದುದರಿಂದ ಜನರು ಸೇರಿರಲಿಲ್ಲ. ಪೋಲೀಸರು ವಿಶೇಷ ಮುಂಜಾಗ್ರತೆ ವಹಿಸಿದ್ದರಿಂದ ದುರ್ಘಟನೆಯಾಗಲಿಲ್ಲ.

ಕರ್ಫ್ಯೂ ಮತ್ತು ಆಯುಧಧಾರಣ ನಿಯಮಗಳನ್ನು ಮುರಿದುದಕ್ಕಾಗಿ ೫೦ ಮೇಲ್ಪಟ್ಟು ಜನರಿಗೆ ಈಗಾಗಲೆ ಶಿಕ್ಷೆಯಾಗಿದೆ. ಪೋಲೀಸರು ಅಲ್ಲಲ್ಲಿ ಝಡತಿ ನಡೆಸಿ ಅನೇಕ ಉಕ್ಕಿನ ಕುಲಾವಿಗಳನ್ನೂ ಚೂರಿಗಳನ್ನೂ ವಶಪಡಿಸಿಕೊಂಡಿದ್ದಾರೆ.

ಮೈಸೂರು ಕಾಂಗ್ರೆಸ್ ಕಾರ್ಯಸಮಿತಿ ಜಾತೀಯ ಗಲಭೆಗಳನ್ನು ನಿಷೇಧಿಸಿದೆ. ಶ್ರೀ ಕೆ. ಟಿ. ಭಾಷ್ಯಂ ಅವರೂ ಒಂದು ಹೇಳಿಕೆ ಹೊರಡಿಸಿ ಸಂಸ್ಥಾನದಲ್ಲಿದ್ದ ಹಿಂದೂ-ಮುಸ್ಲಿಂ ಐಕ್ಯದ ಪರಂಪರೆಯನ್ನು ನೆನವರಿಕೆ ಮಾಡಿಕೊಟ್ಟು ಸುಳ್ಳು ಸುದ್ದಿಗಳಿಂದ ಮೋಸ ಹೋಗಿ ಜನರು ಪರಸ್ಪರ ಹತ್ಯೆಯಲ್ಲಿ ತೊಡಗಬಾರದೆಂದು ಪ್ರಾರ್ಥಿಸಿದ್ದಾರೆ.

ಮೈಸೂರು ನಗರದಲ್ಲಿ ಗಲಭೆ ಹಬ್ಬದಂತೆ ಮುಂಜಾಗ್ರತೆ ವಹಿಸಿದ್ದು ತಾ. ೫ ರಿಂದ ೧ ವಾರ ಯಾವ ಹೆಂಡದಂಗಡಿಯೂ ಸಂಜೆ ೬ ನಂತರ ತೆರೆದಿರಕೂಡದೆಂದೂ ಸಿನೆಮಾ ನಾಟಕ ಗೃಹಗಳಲ್ಲಿ ರಾತ್ರಿ ೯ ರ ನಂತರ ಪ್ರದರ್ಶನ ನಡೆಯಬಾರದೆಂದ ಆಜ್ಞಾಪಿಸಿದ್ದರು.

ಇಂಡೋನೇಶಿಯಾದ ಮುಖ್ಯಮಂತ್ರಿ ಡಾ. ಶಾರೀರರು ಹಿಂದುಸ್ಥಾನದಿಂದ ಸ್ವದೇಶಕ್ಕೆ ಮರಳುವಾಗ ರಂಗೂನಿನಲ್ಲಿದ್ದರು. "ಪಂ. ಜವಾಹರಲಾಲರು ಮಹಾತ್ಮರಿದ್ದು, ಅವರ ಕೈಲಿ ಭಾರತದ ಭವಿತವ್ಯ ಭದ್ರವಾಗಿದೆ" ಎಂದು ಅವರು ಹೇಳಿದರು.

# ಹಾರಿಹೋದ ಹಣ

ಶ್ರೀ ನೇಮಿರಾಜ ಮಲ್ಲ ಅವರಿಂದ

ರಾತ್ರಿ ಕಳೆದು ಬೆಳಗಾಗುತ್ತ ಬರುತ್ತಿತ್ತಷ್ಟೆ. ನಮ್ಮ ಗಾಡಿ ಇನ್ನೂ ಸಾಗುತಿತ್ತು. ಒಂದು ಕಡೆಯಿಂದ ತಂಗಾಳಿ. ಇನ್ನೊಂದೆಡೆಯಿಂದ ಇದ್ದಲಿನ ಹೊಗೆ. ಮುಖ ಹೊರಗೆ ಹಾಕಲಿಕ್ಕೆ ಗೊತ್ತಿಲ್ಲ. ಕಣ್ಣಿನೊಳಗೆ ಈ ಮೊದಲೇ ಸಾಕಷ್ಟು ಇದ್ದಲಿನ ಪುಡಿ ಸಂಚಯವಾಗಿದೆ. ಅದರ ಮೇಲೆ ಜನ ಜಂಗುಳಿ. ಒಂದು ನಿಲ್ದಾಣದಲ್ಲಿ ಕೆಲವರು ಇಳಿದರೆ, ಹಲವರು ಒಳಸೇರುವರು.

ಜನನ-ಮರಣ. ಹಾಗೇ ಇದೂ......

ಕುಳಿತು ಕುಳಿತು ಅಂಗಾಂಗಳೆಲ್ಲ ಶಿಥಿಲವಾಗಿದ್ದುವು. ಅತ್ತಿತ್ತ ತಿರುಗಲು ಎಡೆಯಿಲ್ಲ. ಕಾಲನ್ನು ನೀಡುವೆನೆಂದರೆ ಕೆಳಗೊಬ್ಬ ತೂಕಡಿಸುತಿದ್ದಾನೆ. ಬದಿಯಲ್ಲಿರುವವನಂತೂ ನನ್ನನ್ನು ಅದಷ್ಟು ಹಿಂಡುತ್ತಲೇ ಇರುವನಲ್ಲ? ಹುಂ. ಇನ್ನೂ ಹನ್ನೆರಡು ಗಂಟೆಗಳ ಪಯಣ ಹೀಗೇ ಸಾಗಬೇಕು? ಆ ಪ್ರಯಾಣಾಂತ್ಯದಲ್ಲಿ ನನ್ನ ವಸ್ಥೆ ಏನಾದೀತೆಂದು ನನಗೆ ಚಿಂತೆ. ಆದರೂ ಹೋಗಬೇಕು. ಮನೆಯನ್ನು ಸೇರಬೇಕು. ಮತ್ತೆಲ್ಲ ಒಳ್ಳೆಯದಾಗುವುದೆಂಬ ಆಶಾವಾದದ ಬೆಳಕು.

ಅಯ್ಯೋ ಈ ಆಶಾವಾದ! ಸಾಕಿದು ಬಿಸಿಲು ಗುದುರೆ. ಅಬ್ಬಾ! ಕೆಲಸಮಯದ ಹಿಂದೆ ರಚಿಸಿದ ಒಂದು ಪದ್ಯದ ಕೆಳಗಿನ ಚರಣಗಳು ನನಗೆ ಜ್ಞಾಪನವಾದುವು.

...ಆಶೆಯೆಂಬ ಬಿಸಿಲುಗುದುರೆ  
ಪ್ರೇಮವೆಂಬ ರಥಿಕನನ್ನು  
ರಶ್ಮಿ ಕಳಚಿ ಒಯ್ಯುತಿದೆ  
ಸೀಮೆ ಮುಟ್ಟಲದರನೊಡನೆ...  
ಸಾಗುತಿದೆ ಶಂತೆಯು  
ಜೀವನದ ಸಂತೆಯು...

ನನ್ನ ಪೇಚಾಟ ಕಂಡು ನನ್ನೆದುರು ಕುಳಿತಿದ್ದ ಗೆಳೆಯ ರಂಗನಾಥ ನಗುತಿದ್ದ. ಆದರೆ ಅವನ ವಸ್ಥೆ? ಬಹುಶಃ ನನ್ನದಕ್ಕಿಂತ ತುಸು ಉತ್ತಮವಿರಬಹುದು—ವಿನಾ ಬೇರೆಯಲ್ಲ.

ಪ್ರಕೃತಿ ರಾಶಿ ನಮ್ಮೆದಿರಿನಿಂದ ಹಿಂದೆ ಓಡುವಂತೆ ತೋರುತಿತ್ತು. ಅಲ್ಲೊಂದು ಹೊಳೆ, ಇಲ್ಲೊಂದು ಗುಡ್ಡ ಎಲ್ಲವನ್ನೂ ನಮ್ಮ ಬಂಡಿ ವೇಗವಾಗಿ ದಾಟುತಿತ್ತು. ಸ್ಫೂರ್ತಿಯಿಂದ ಆವೇಶ ಹೊಂದುವ ಸ್ವಭಾವದ ಮನುಷ್ಯರಾದರೆ ತಮ್ಮ ಭಾವನೆಗಳನ್ನಾಗ ಎಷ್ಟು ದೂರ ಕೇಲ ಬಿಡುತಿದ್ದರೋ ಏನೋ! ಆದರೆ ನನಗೆ ಅವುಗಳ ವರ್ಚಸ್ಸೇನೋ ತಗಲಿಲ್ಲ. ನನ್ನ ದೃಷ್ಟಿಯಲ್ಲಿ ಎಲ್ಲವೂ ಮಣ್ಣು. "ಮಣ್ಣಿಂದ ಕಾಯ ಮಣ್ಣಿಂದ; ಮಣ್ಣಿನಿಂದ ಸಕಲವಸ್ತುಗಳೆಲ್ಲ..."

ಹೌದು—ನನಗೆ ಹಿಂದೆ ಯಾರೋ ಹೇಳಿದ್ದರು: ರೈಲು ಪ್ರಯಾಣವೂ ಜೈಲು ಜೀವನವೂ ಒಂದೇ ಎಂದು. ಆ ಮಾತು ನಿಜವೆಂದು ನನಗೀಗ ತೋರಿತು. ಹನ್ನೆರಡು ಗಂಟೆಯಲ್ಲೇ ಹೀಗೆ ಬಳಲಿ ಬೆಂಡಾಗಿ ಸೊರಗಿ ಕಡ್ಡಿಯಂತಾದ ನನ್ನಂತಹ ಮನುಷ್ಯ ಪ್ರಾಣಿ ಜೈಲಿನಲ್ಲಿ ಎಷ್ಟು ಕಾಲ ಬದುಕೀತು?... ನಿಲ್ದಾಣ ಬಂದರೆ ಎದ್ದು ಹೊರ ಹೋಗಲು ಸಾಧ್ಯವಿಲ್ಲ. ಕೂಡಲೆ ಕುಳಿತ ಸ್ಥಳ ಆಕ್ರಮಿತವಾಗುವದು. ಕುಳಿತಲ್ಲಿಗೆ ಮಾರಲು ಏನಾದರೂ ಬಂದರೆ ಹೊಲಸು ಪದಾರ್ಥಗಳನ್ನು ಕೊಂಡು ಸೇವಿಸಬೇಕು?

ಆದರೆ ಎಲ್ಲರೂ ನಮ್ಮ ಹಾಗಲ್ಲ: ಫಸ್ಟ್ ಕ್ಲಾಸಂತೆ; ಸೆಕೆಂಡ್ ಕ್ಲಾಸಂತೆ. ನಮ್ಮ 'ಕ್ಲಾಸಿ'ನ ಎಷ್ಟೋ ಪಾಲು ಹೆಚ್ಚು ಹಣ ಅವುಗಳಿಗೆ ಕೊಡಬೇಕಂತೆ. ಅಲ್ಲಿ ಬಹಳ ಸುಖ. ಮೆತ್ತನ್ನ ಹಾಸಿಗೆಗಳು. ಜನ ಕಡಿಮೆ. ವಿರಾಮವಾಗಿ ಮಲಗಬಹುದು. ತಿಂದಿ ತೀರ್ಥಗಳೆಲ್ಲ ಅತ್ಯುತ್ತಮವಾದುವುಗಳು. ಕುಳಿತಲ್ಲೇ ಬೇಕಾದರೂ ದೊರೆಯುತ್ತವೆ. ವಿದ್ಯುಚ್ಛಕ್ತಿಯ ಬೀಸಣಿಗೆ. ಎಲ್ಲವೂ ಮನೆಯ ಹಾಗೆಯೆ...

ಇಷ್ಟು ಸುಖ ಪಡಬೇಕಾದರೆ ಎಷ್ಟೋ ಹಣ ಕೊಡಬೇಕು! ನನ್ನನ್ನು ಇಷ್ಟರಿಂದಲೆ ಜಿಪುಣನೆಂದು ತಿಳಿದುಕೊಳ್ಳಬೇಡಿರಿ. ಇನ್ನೂ ಇದೆ.

ನನಗಿಂತಲೂ ಕೀಳ್ತರಗತಿಯ ಜನರಿದ್ದರು. ಅವರೊಡನೆ ಈ ಕೊನೆಯ ದರ್ಜೆಗೆ ಬೇಕಾದಷ್ಟು ಹಣ ಕೊಡಲು ಕೂಡ ಇಲ್ಲ! ರೈಲು ಗಾಡಿಯ ಹತ್ತುವ—ಇಳಿಯುವ ಮೆಟ್ಟಲುಗಳಲ್ಲಿ ನಿಂತೇ ಅವರ ಪ್ರಯಾಣ— ಊರಿಂದೂರಿಗೆ! ಬೈದರೆ ಕೇಳಬೇಕು; ಹೊಡೆದರೆ ತಿನ್ನಬೇಕು. ಇನ್ನೂ ಎಷ್ಟೋ ಅಪಮಾನ—ಅನಾನುಕೂಲತೆಗಳನ್ನವರು ಅನುಭವಿಸಬೇಕು!

ಅವರೆಲ್ಲ ದಡ್ಡರಂತೆ. ಕೆಲವರು ಹೇಳುವರು ಹಾಗೆ. ಕೆಲಸ ಮಾಡಲು ಮನಸ್ಸಿಲ್ಲದೆ ಕಾಲಕಳೆಯುವವರಂತೆ. ಆದರೆ ನಾನೇನು ದುಡಿಯುತ್ತಿರುವೆನೆಂದು ನನಗೇ ತೋರಿತು. ಹುಟ್ಟಿ ಇಪ್ಪತ್ತು ವರ್ಷಗಳು ದಾಟಿದರೂ ನಾನೇನಾದರೂ ಈ ವರೆಗೆ ಪ್ರತಿಫಲ ಸಿಗುವಂತಹ ಕೆಲಸ-ದುಡಿಮೆ ಮಾಡಿದ್ದಿಲ್ಲ. ನನ್ನ ಹೆಚ್ಚಿನ ಆಯುಷ್ಯ ವಿದ್ಯಾಲಯದಲ್ಲಿ, ಮತ್ತೆ ಅಲ್ಪಸ್ವಲ್ಪ ಉಳಿದ ಸಮಯ ಬೇರೆ ಸೋಮಾರಿ ಕೆಲಸಗಳಲ್ಲಿ. ನನ್ನ ಸಂಪಾದನೆಯಲ್ಲಿ ನನ್ನ ಮನೆ—ಸಂಸಾರವನ್ನು ರಕ್ಷಿಸುವುದಕ್ಕಿಂತ ನನ್ನ ರಕ್ಷಣೆಯೇ ಆಗಲಿಕ್ಕಿಲ್ಲ. ನಾನದಕ್ಕೆ ಸಿದ್ಧನೂ ಇಲ್ಲ. ದುಡಿದೇ ಉಣ್ಣಬೇಕೆಂಬ ನಿಯಮವಾದರೆ ನಾನು ಬಹಳ ಮಾಡಿ ಸಾಯಲೆ ಬೇಕಾದೀತು! ದುಡಿತದ-ಬೆವರಿನ ಲೋಕಕ್ಕೂ ನನಗೂ ಮಧ್ಯೆ ದೊಡ್ಡದೊಂದು ಅಂತರವೇ ಇದೆ.

ಆದರೆ ಅವರೆಲ್ಲ ಹುಟ್ಟಿದಂದಿನಿಂದ ಸಾಯುವ ತನಕ ದುಡಿಯಲೇಬೇಕಂತೆ! ನನ್ನಂತೆ ಅವರು ವಿದ್ಯಾಲಯಗಳ ಕುರಿತು ಕನಸಿನಲ್ಲಿ ಕೂಡ ನೆನೆಯಲೂ ಸಾಧ್ಯ-ಅಸ್ಪದವಿಲ್ಲ! ಅಷ್ಟು ದುಡಿದರೂ ಅವರ ಪ್ರಯಾಣ ರೈಲುಗಾಡಿಯ ಮೆಟ್ಟಲು ಹಲಗೆಗಳ ಮೇಲೆ ನಿಂತುಕೊಂಡು!

ನನಗೆ 'ಭಾಗ್ಯ' ವಿದೆ. 'ಲಕ್ಷ್ಮಿ'ಯ ಕಟಾಕ್ಷವಿದೆ. ಅವರು ಯಾವಾಗಲೂ ಹಾಗೆಯೇ ನಿರ್ಭಾಗ್ಯರು: ಅದನ್ನು ಅಲ್ಲಗಳೆಯಲು ಅವರಿಂದ ಸಾಧ್ಯವಿಲ್ಲ. ಎಷ್ಟೋ ವರುಷಗಳಿಂದ ಈ ರೂಢಿ ಬೆಳೆಯುತ್ತ ಬಂದಿದೆ! ಅದನ್ನು ಮುರಿಯಬಾರದು. ರೂಢಿಯ ಕಟ್ಟುಕಟ್ಟಳೆಯ ದಾಸರು ನಾವು. ಕುರುಡರ ಹಾಗೆ ಹುಟ್ಟುತ್ತೇವೆ, ಕುರುಡರ. ಹಾಗೆ ಜೀವಿಸಿ ಮುಂದೆ ಸಾಯುತ್ತೇವೆ. ಎಲ್ಲರಿಗೂ ಎಲ್ಲವೂ ದೇವರುಕೊಟ್ಟದ್ದು: ಕಳ್ಳನಿಗೆ ಕಳ್ಳತನ, ಮೋಸಗಾರನಿಗೆ ಮೋಸತನ, ಬಡವರಿಗೆ ಬಡತನ, ಧಂಡವಲಗಾರನಿಗೆ ಧಂಡವಲ, ಜಮೀನದಾರನಿಗೆ ಜಮೀನು—ಎಲ್ಲವನ್ನೂ ದೇವರೇ ಕೊಟ್ಟದ್ದು!

ಅಯ್ಯೋ ದೇವರೇ ನೀನು ಇಂತಹ ಪಕ್ಷಪಾತಿಯೇ?

ಒಂದೆಡೆ ಒಬ್ಬ ಕುರುಡ ಒಳ ಹೊಕ್ಕ ಅವನನ್ನು ನಡೆಸಲು ಸಣ್ಣ ಒಬ್ಬ ಹೆಣ್ಣುಮಗಳು. ಏನೋ ಪದ್ಯಗಳನ್ನು ಒದರಿದ. ಹೆಣ್ಣುಮಗಳು ಅವನ ಕೈಹಿಡಿದು ಎಲ್ಲರ ಬಳಿಗೂ ಬರುತ್ತಿದ್ದಳು. 'ರಘುಪತಿ ರಾಘವ ರಾಜಾರಾಮ್' ಪದ್ಯ ಹಾಡುತಿದ್ದನವ. ಅವನ ಆ ಹೃದಯವಿಲ್ಲದ ದೇಹದಿಂದಲೂ ದೇವರ ಹೆಸರು ಮಾಯವಾಗಿರಲಿಲ್ಲ! ಆದರೆ ಹೆಸರು ಮಾತ್ರವೆಂದು ನನಗೆ ಮತ್ತೆ ಗೊತ್ತಾಯಿತು: ಏಕೆಂದರೆ ಅದರ ನಂತರ ಏನೇನೋ ಬೇರೆ— ಚಲನ ಚಿತ್ರದ ಪದ್ಯಗಳನ್ನು ಹಾಡತೊಡಗಿದ.

ಅವನಿಗೆ ಕಣ್ಣಿಲ್ಲ ನಿಜ. ಆದರೆ ಆ ಹುಡುಗಿಗೆ ಕಣ್ಣುಗಳಿದ್ದವು, ಕಾಲುಗಳಿದ್ದುವು. ಕೈಗಳಿದ್ದುವು! ಅವಳು ದುಡಿಯಬಹುದಲ್ಲ! ಕೆಲವರ್‍ಹೇಳಬಹುದು ನಿಮ್ಮ ಮಗಳಾಗಿದ್ದರೆ ಆ ವಯಸ್ಸಿನಲ್ಲಿ ಅದೆಷ್ಟು ಫ್ಯಾಶನ್ (fashion) ಪುಸ್ತಕಗಳನ್ನೋದಿ ಶೃಂಗಾರವಾಗುತ್ತಿದ್ದಳು! ಅವಳಿಗೆ ಎಷ್ಟು ಸೀರೆ ಬೇಕಾಗುತಿತ್ತು! ಎಷ್ಟು ಆಭರಣ! ಎಷ್ಟು ನಮೂನೆಯ ಅನನ ಚೂರ್ಣಗಳು ......ಅವಳು ಶ್ರೀಮಂತನ ಮಗಳು. ಇವಳು ಕುರುಡನ, ಬೇಡುವವನ ಮಗಳು!

ದೊಡ್ಡ ಸಾಗರವಿದೆ ಅವರಿಬ್ಬರ ನಡುವೆ.

ತಲೆ ಸಿಡಿತ ಶುರುವಾಗುತಿತ್ತು ನನಗೆ. ಒಂದೇ ಸಮನೆ ಬೆವರೂ ಹರಿಯುತಿತ್ತು. ಅಂಗಿಯೆಲ್ಲ ಕೊಳಕಾಗಿದೆ. ಮುಖ ಕಪ್ಪಾಗಿದೆ. ಇಂದು ಸ್ನಾನ ಮಾಡಲಿಲ್ಲ. ತಲೆಯಲ್ಲೆಲ್ಲ ಎಣ್ಣೆ ಆರಿ ಹೋಗಿ ಕಲ್ಲಿದ್ದಲಿನ ಹುಡಿ ಅಂಟಿಕೊಂಡಿದೆ. ಆದರೆ ತಿಳಿದುಕೊಳ್ಳಿ— ಇದು ಅರ್ಧದಿನದ ಅನುಭವ. ಇನ್ನರ್ಧ ದಿನದಲ್ಲಿ ನಾನು ನನ್ನ ಮನೆಯನ್ನು ಸೇರುವೆ. ಮತ್ತೆ ಮೂರು ತಿಂಗಳು ಈ ರೀತಿಯ ಪಯಣವಿಲ್ಲ.

ಕುರುಡ, ಅವನ ಮಗಳು ಎಲ್ಲಿ? ಅವರ ಮೈ ಮತ್ತು ವಸ್ತ್ರಗಳು ನೀರನ್ನು—ತಿಳಿನೀರು ಬೆವರಲ್ಲ—ನೋಡದೆ ಎಷ್ಟು ಕಾಲವಾಗಿತ್ತೋ ಏನೋ! ಎಷ್ಟು ಕೊಡ ಬೆವರು ಈ ಮೊದಲು ದೇಹದಿಂದ ಹರಿದಿತ್ತೋ! ಗೊಡವೆಯಿಲ್ಲದೆ ಅವರಿದ್ದಾರೆ, ಬಹುಶಃ ಅವರದೇ ಅವರಿಗೆ ಗೊಡವೆಯಿಲ್ಲ!

ಆದರೂ ನನ್ನಂತಹ, ಎಲ್ಲವೂ ತನ್ನದೇ ಎಂದು ತಿಳಿಯುವ, ಕೋಮಲ ವ್ಯಕ್ತಿಗಳೂ ಇದ್ದಾರೆ!— ಒಂದೇ ಲೋಕದಲ್ಲಿ, ಒಂದೇ ದೇಶದಲ್ಲಿ, ಒಂದೇ ರೈಲು ಬಂಡಿಯಲ್ಲಿ!

ದೇವರ ದಯೆಯೋ. ನಮ್ಮ ಮಾಯೆಯೋ ನನಗೆ ಗೊತ್ತಿಲ್ಲ.

ಬಂಡಿ ಒಂದೆಡೆ ನಿಂತಿತು. ಬಹುಶಃ ತುಸುಹೊತ್ತಿನಲ್ಲೆ ಪುನಃ ಸಾಗುವುದು. ನಿಲ್ದಾಣದ ಆಚೆ ಬದಿಯಲ್ಲಿ ಒಂದು ಸಣ್ಣ ಅಂಗಡಿ ಕಾಣುತಿತ್ತು. ಒಬ್ಬ ಪ್ರಾಯದ ಮುದುಕಿ ಎಲೆ ಅಡಿಕೆ ಜಗಿಯುತ್ತ ಕುಳಿತಿದ್ದಳು. ಇನ್ನೊಬ್ಬ ನಡುಪ್ರಾಯದ ಹೆಂಗಸು ಅತ್ತಿತ್ತ ಓಡಾಡುತಿದ್ದಳು. ಮೂವರು ಮಕ್ಕಳು, ತಮಗೆ ಹೊರಲಾರದಷ್ಟು ಭಾರವಾದ ಬಾಳೆಹಣ್ಣಿನ ಗೊನೆಗಳನ್ನು ಹಿಡಿದುಕೊಂಡು ಪ್ರಯಾಸದಿಂದ ಬಂಡಿಯೆಡೆಗೆ ಓಡುತ್ತ ಬರುತಿದ್ದರು. ನಾವೆಲ್ಲ ಒಳಗಿಂದ 'ವಾಳಪ್ಪಳಂ ವಾಳಪ್ಪಳಂ' ಎಂದು ಕೂಗತೊಡಗಿದೆವು.

ಎಲ್ಲೆಡೆಗಳಿಂದಲೂ ಕರೆಬರುತ್ತಿತ್ತು. ಹುಡುಗರು ಕಕ್ಕಾವಿಕ್ಕಿಯಾದರು. "ಅಣಾಕು ನಾಲ್ ಅಣಾಕು ನಾಲ್!" ಎಂದು ಬೊಬ್ಬೆ ಹಾಕುತ್ತ ಅತ್ತಿತ್ತ ಓಡಿದರು.

ಗೊನೆಗಳ ಮೇಲೆ, ಗೊನೆಗಳು ಮುಗಿದುವು. ಜನರೆಲ್ಲ ಅವಸರವಸರದಿಂದ ಬಾಳೆ ಹಣ್ಣುಗಳನ್ನು ತಿಂದು, ಸವಿದು ತೇಗಿದರು. ಅಂಗಡಿಯಲ್ಲಿರುವ ಮುದುಕಿ ನಗುತ್ತಿದ್ದಳು. ನಡುಪ್ರಾಯದ ಹೆಂಗಸು ಗೊನೆಗಳನ್ನು ಒಳಗಿಂದ ತಂದು ಕೊಡುತಿದ್ದಳು. ಒಳ್ಳೆಯ ವ್ಯಾಪಾರ. ಸಾಕಷ್ಟು ಹಣ ಸಿಕ್ಕಿರಬಹುದು.

ಕೆಲವೊಮ್ಮೆ ಚಿಲ್ಲರೆಯಿಲ್ಲ. ಬಾಳೆ ಹಣ್ಣು ತಿಂದಾಗಿದೆ. ಚಿಲ್ಲರೆ ತರದಿದ್ದರೆ ಹಣಕೊಡುವದಿಲ್ಲ ಎಂದು ಅವರು ಹುಡುಗರನ್ನು ಗದರಿಸುತಿದ್ದರು. ಪಾಪ; ಹುಡುಗರು ನಮ್ಮಲ್ಲಿರುವಂತಹ ದೊಡ್ಡ ವ್ಯಾಪಾರಿಗಳಲ್ಲ! ಅವರು ದುಡಿಯುವುದು ದಿನಕ್ಕೆ... ಅವರೊಡನೆ ಕಳ್ಳಸಂತೆಯ ಹಣ ಸಂಚಯವಿಲ್ಲ. ಚಿಲ್ಲರೆ ಕೊಟ್ಟೇ ಸಾಮಾನು ಪಡೆಯಬೇಕೆಂದು ನಿರ್ಬಂಧಪಡಿಸಲು ಸಾಮರ್ಥ್ಯವುಳ್ಳವರೂ ಅಲ್ಲ ಮತ್ತಿಲ್ಲಿ ಚಿಲ್ಲರೆ!

ನನ್ನ ಗಾಡಿಯಲ್ಲಿ ಕುಳಿತ ಮನುಷ್ಯನೊಬ್ಬನು ಹಾಗೆಯೇ ಹೇಳಿದ. ಹುಡುಗ ಚಿಲ್ಲರೆ ತರಲಿಕ್ಕೆಂದು ಅಂಗಡಿಗೆ ತಿರುಗಿ ಓಡಿಹೋದ. ಇನ್ನೂ ಅರ್ಧಮುಗಿದ ಗೊನೆಯೊಂದು ಅವನ ಕೈಯಲ್ಲೇ ಇತ್ತು.

ಅಲ್ಲಿ, ನಡುಪ್ರಾಯದ ಹೆಂಗಸು ಚಿಲ್ಲರೆಯ ಚೀಲವನ್ನೆಲ್ಲ ಬರಿದುಮಾಡುತಿದ್ದಳು. ಕಾಸು, ಕಾಲಾಣೆ, ಅರ್ಧಾಣೆ—ಎಲ್ಲ ಬಗೆಯ ನಾಣ್ಯಗಳನ್ನೂ ಒಟ್ಟು ಮಾಡುತಿದ್ದರು. ಹುಡುಗ ಹಣವನ್ನು ಎಣಿಕೆ ಮಾಡುತಿದ್ದ.

ಉಗಿಬಂಡಿ 'ಕೂ!' ಎಂದಿತು. ಹುಡುಗ ಆಗ ಎಣಿಕೆಮಾಡಿ ಮುಗಿಸಿದ್ದನಷ್ಟೆ. ಚಕ್ರಗಳು ಮೆಲ್ಲನೆ ಚಲಿಸತೊಡಗಿದವು. ಇನ್ನೊಂದು ಸೆಳೆತ. ಸರಿ. ಬಂಡಿ ಮುಂದರಿದೇಬಿಟ್ಟಿತು.

ಹುಡುಗ ಓಡುತ್ತ ಬರುತಿದ್ದ. ಓಡಿಯೋಡಿ ನಮ್ಮ ಗಾಡಿಯ ಮೆಟ್ಟಲನ್ನು ಹತ್ತಿದ. ಒಳಗೆ ಮನುಷ್ಯ ಈಗ ಒಂದು ರೂಪಾಯಿ ನೋಟುಗಳನ್ನೆಲ್ಲ ಬದಿಗಿಟ್ಟು ಹತ್ತು ರೂಪಾಯಿಯ ನೋಟನ್ನು ತೋರಿಸಿದ. ಹುಡುಗನ ಮುಖ ಚಿಕ್ಕದಾಯಿತು. ಆಗ 'ಸಾಮಿ ಒಂದು ರೂಪಾಯಿಂದೆ ಚಿಲ್ಲರೆ ಮಾತ್ರ ಉಂಡು,' ಎಂದು ಅಳುವ ಧ್ವನಿಯಲ್ಲಿ ನೊರೆದುಬಿಟ್ಟ. ನಾವೆಲ್ಲ ಒಳಗಿನವವನ ಈ ಕುಹಕತನವನ್ನು ಕಣ್ಣುಬಿಟ್ಟುಕೊಂಡು ನೋಡುತಿದ್ದೆವು.

ಬಹುಶಃ ನಮ್ಮ ನೋಟ ಅವನಿಗೆ ಅರ್ಥವಾಗಿರಬಹುದು. ಹೃದಯ ಪರಿವರ್ತನೆಯನ್ನು ಮಾಡಿರಬಹುದು. ಆದರೆ ಅದು ತಡವಾಗಿ ಆಯಿತು. ಬಂಡಿ ಬಹಳ ದೂರ ಆಗಲೇ ಸಾಗಿತ್ತು. ವೇಗವೂ ಹೆಚ್ಚಿತ್ತು.

ಮುಖವನ್ನು ಹಿಂಡುತ್ತ ಮೆಲ್ಲನೆ ಪುನಃ ತೊಗಲ ಚೀಲವನ್ನು ತೆಗೆದು ರೂಪಾಯಿ ನೋಟುಗಳ ಕಟ್ಟನ್ನು ತೆಗೆದ. ನೂರಕ್ಕಿಂತಲೂ ಹೆಚ್ಚು ನೋಟುಗಳಿದ್ದುವು ಅದರಲ್ಲಿ! ಕಟ್ಟು ಬಿಚ್ಚಿ ಅದರಲ್ಲಿ ಹೆಚ್ಚು ಕೊಳಕಾದ ಹಾಳಾದ ನೋಟನ್ನು ಸ್ವಲ್ಪ ಹೊತ್ತು ಆರಿಸಿ ಕೊನೆಗೆ ಹುಡುಗನಿಗೆ ತೋರಿಸಿದ. ಹುಡುಗನು ಚಿಲ್ಲರೆಯನ್ನು ಹೊರಗಿನಿಂದಲೇ ಹೇಗಾದರೂ ಕೊಟ್ಟ. ಒಳಗಿನವ ಅತೀ ಸೂಕ್ಷ್ಮದಲ್ಲಿ ನಾಲ್ಕೈದು ಸಲ ಕಾಸು—ಪಾವಾಣೆ—ಅರ್ಧಾಣೆಗಳನ್ನೆಲ್ಲ ಎಣಿಕೆ ಮಾಡಿಯಾದ ಮೇಲೆ ಹೇಗಾದರೂ ರೂಪಾಯಿ ನೋಟನ್ನು ಬೆರಳುಗಳಿಂದ ಅನೇಕ ಸಲ ತಿಕ್ಕಿ, ಒಂದೇ ನೋಟಿದೆ ಎಂದು ಪೂರ್ಣ ವಿಶ್ವಾಸವಾದ ನಂತರ, ಹುಡುಗನ ಕೈಗಿತ್ತ.

ಆಗ ಬಂಡಿ ವೇಗವಾಗಿ ಹೋಗುತ್ತಿತ್ತು. ಗಾಳಿಯ ದೆಸೆಯಿಂದ ನಮ್ಮ ಕಣ್ಣುಗಳನ್ನು ಕೂಡ ತೆರೆಯಲಾಗುತಿದ್ದಿಲ್ಲ. ಹುಡುಗನ ಕಣ್ಣಿನಲ್ಲಿ ಇದ್ದಲಿನ ಹೊಗೆ ತುಂಬಿ ಅವನು ಕಣ್ಣು ಮುಚ್ಚಿಕೊಂಡ. ಆಗ ಕೈಯಲ್ಲಿದ್ದ ನೋಟನ್ನು ಸೊಂಟದಲ್ಲಿ ಸಿಕ್ಕಿಸಲು ಪ್ರಯತ್ನಿಸುತಿದ್ದ

ಆದರೆ ಗಾಳಿ!

ಕೈಯಲ್ಲಿದ್ದ ನೋಟು ಹಿಡಿತ ತಪ್ಪಿ ದೂರ ಹಾರಿತು. ಹುಡುಗನಿಗೆ ಕಣ್ಣು ಬಿಡಲೂ ಸಾಧ್ಯವಿಲ್ಲ. ಅಕೋ ಏನೋ, ಅವನಿಗೆ ಏನೂ ತಿಳಿಯದಾಯಿತು.

ಬಂಡಿಯ ವೇಗ ಪರಮಾವಧಿಯನ್ನು ಮುಟ್ಟುತಿತ್ತು. ಮರುಗಳಿಗೆಯಲ್ಲಿ ಏನೋ ವಿಚಿತ್ರ ಶಬ್ದ ಕೇಳಿತು. ಹುಡುಗ ಆಗ ಅಲ್ಲಿರಲಿಲ್ಲ......

ನನ್ನ ಕಣ್ಣಿನೊಳಗೆ ಆಗ ಇದ್ದಲಿನ ರಾಶಿಯೊಂದು ಹೊಕ್ಕಿತು. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡೆ.

ಆದರೂ ಕಣ್ಣಿನೊಳಗಿಂದ ನೀರು ಹರಿಯುತಿತ್ತು. ಬಹುಶಃ ಇದ್ದಲಿನ ಹುಡಿ ಒಳಗಿನ ಕೋಮಲ ಚರ್ಮಕ್ಕೆ ಗಾಯಮಾಡಿರಬಹುದು.

ಕಣ್ಣೀರು ಹರಿಯುತ್ತಲೇ ಇತ್ತು. ಯಾಕೆ ಏನು ಎಂದು ನನಗೆ ಸ್ಪಷ್ಟ ಗೊತ್ತಿಲ್ಲ.

ಹಳ್ಳಿಯ ಕಾನುಭೋಗನೊಬ್ಬನಿಗೆ ಕಾನುಭೋಗ ಪರೀಕ್ಷೆಯಲ್ಲಿ ಪರೀಕ್ಷಕರು ಒಂದು ಸಮಸ್ಯೆಯನ್ನು ಕೊಟ್ಟರು. ಅವನು ಒಂದು ವಸ್ತುವನ್ನು ಬರೆದು ಅದರ [illegible] ಬರೆದ ಸಹೆ ಅದನ್ನು ... ಮಾಡಬೇಕೆಂದು ಕೇಳಿದರು.

[illegible]

[illegible]

